ಗೃಹ ಸರಸ್ವತೀ ಗ್ರಂಥಮಾಲೆ 71

# ವೈದ್ಯ ವಿಜ್ಞಾನ ಸಾಧಕರು

ಡಾ. ಎಚ್. ಡಿ. ಚಂದ್ರಪ್ಪಗೌಡ



ಗೃಹಸರಸ್ವತೀ ಗ್ರಂಥಮಾಲೆ-೭೧

ಪ್ರಧಾನ ಸಂಪಾದಕರು

ಡಾ. ಕೆ. ವಿ. ಪುಟ್ಟಪ್ಪ, ಎಂ.ಎ.,ಡಿ.ಲಿಟ್,

# ವೈದ್ಯ ವಿಜ್ಞಾನ ಸಾಧಕರು

ಡಾ. ಎಚ್. ಡಿ. ಚಂದ್ರಪ್ಪಗೌಡ




1986

"Vaidya Vignana Sadhakaru" : by Dr. H·D. Chandrappa Gowda, First Published by the Director, Prasaranga, University of Mysore, Manasagangotri, Mysore-6, 1986; Crown Octavo, XX + 118, Price : Rs. 6-00

ಮೊದಲನೆಯ ಮುದ್ರಣ ೧೯೮೬



ಬೆಲೆ

ರೂ. 6-00

ಪ್ರಕಾಶಕರು

ನಿರ್ದೇಶಕರು, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು-೬

ಮುದ್ರಕರು

ವಾಸವಿ ಪ್ರಿಂಟರ್ಸ್, ೩/೧, ಮೊದಲನೇ ಮುಖ್ಯ ರಸ್ತೆ, ಜಯನಗರ, ಮೈಸೂರು-೧೪

# ಗೃಹಸರಸ್ವತೀ ಗ್ರಂಥಮಾಲೆಯನ್ನು ಕುರಿತು

"ಪ್ರೌಢ ಶಿಕ್ಷಣದ ಗುರಿಗಳೇ ಬೇರೆ, ಜನಪ್ರಿಯ ಶಿಕ್ಷಣದ ಗುರಿಗಳೇ ಬೇರೆ; ಒಂದರ ಉದ್ದೇಶ ಜ್ಞಾನವನ್ನು ಬೆಳೆಸುವುದು. ಇನ್ನೊಂದರದು ಅದನ್ನು ಹರಡುವುದು ಮತ್ತು ಈಗಾಗಲೇ ತಿಳಿದುಬಂದಿರುವ ವಿಷಯಗಳಲ್ಲಿ ಜನರ ಆಸಕ್ತಿಯನ್ನು ಹೆಚ್ಚಿಸುವುದು" ಎಂದು ಲಾರ್ಡ್ ಮಾರ್ಲೇ 'ಸಾರ್ವಜನಿಕ ಸಂಸ್ಕೃತಿ' ಎಂಬ ತನ್ನ ಪ್ರಬಂಧವೊಂದರಲ್ಲಿ ಹೇಳಿದ್ದಾನೆ. ಇಂದಿನ ವಿಶ್ವವಿದ್ಯಾನಿಲಯಗಳ ಹೊಣೆಗಾರಿಕೆಗಳಲ್ಲಿ–ಅದರಲ್ಲೂ ನಮ್ಮಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ–ಎರಡನೆಯ ಉದ್ದೇಶ ಮೊದಲಿನದರಷ್ಟೇ ಮಹತ್ವವನ್ನು ಪಡೆಯಬೇಕು. ಅಜ್ಞಾನ ತುಂಬಿಕೊಂಡಿರುವ ಸಮಾಜ ಸುತ್ತುವರಿದಿರುವ ಯಾವುದೇ ವಿಶ್ವವಿದ್ಯಾನಿಲಯ ಕಲಿಕೆಯ ಕೇಂದ್ರವಾಗಿ ಊರ್ಜಿತವಾಗಲಾರದು. ಒಂದು ಕಡೆ ಅದು ಹೊಸ ಅರಿವಿನ ಅನ್ವೇಷಣೆಗೆ ಉತ್ತೇಜನ ಕೊಟ್ಟು ಅವುಗಳನ್ನು ಪ್ರೌಢ ಪ್ರಕಟಣೆಗಳು ಮತ್ತು ಉಪನ್ಯಾಸಗಳ ಮೂಲಕ ಬೆಳಕಿಗೆ ತರಬೇಕು. ಮತ್ತೊಂದು ಕಡೆ, ಯಾವುದೋ ಕಾರಣದಿಂದ ವಿಶ್ವವಿದ್ಯಾನಿಲಯವನ್ನು ಹೊಗಲಾರದ ಜನರಿಗೆ ಅಂಥ ಜ್ಞಾನವನ್ನು ಹಂಚಬೇಕು. ಈ ಉದ್ದೇಶದ ಸಾಧನೆಗಾಗಿ ಮಹತ್ವಪೂರಿತವೂ ಆಸಕ್ತಿಕರವೂ ಆದ ವಿವಿಧ ವಿಷಯಗಳನ್ನು ಕುರಿತು ಹೊಸ ಹೊಸ ಪುಸ್ತಕಗಳನ್ನು ನಮ್ಮ ವಿಶ್ವವಿದ್ಯಾನಿಲಯಗಳು ಪ್ರಕಟಿಸಬೇಕು. ಇದರಿಂದ ಪ್ರೌಢ ಶಿಕ್ಷಣಕ್ಕಾಗಿ ತನ್ನಲ್ಲಿಗೆ ಬಂದ ವಿದ್ಯಾರ್ಥಿಗಳನ್ನು ಮಾತ್ರವಲ್ಲದೆ, ಹೊರಗೇ ಉಳಿಯುವ ಅವರ ತಂದೆತಾಯಿಗಳು, ಪೋಷಕರು ಮತ್ತು ಇತರ ಜನ ಸಮುದಾಯವನ್ನು ವಿಶ್ವವಿದ್ಯಾನಿಲಯವು ಸುಶಿಕ್ಷಿತರನ್ನಾಗಿ ಮಾಡಿದಂತಾಗುವುದು ಮಾರ್ಲೆಯೇ ತನ್ನ ಪ್ರಬಂಧದ ಬೇರೊಂದು ಕಡೆ ಹೇಳುವಂತೆ "ಯಾವ ಸಮಾಜದಲ್ಲಿ ಬಹು ಜನರ ನೆಮ್ಮದಿ, ಆಸಕ್ತಿ, ಕುತೂಹಲ, ಸಾಮರ್ಥ್ಯ ಇವೆಲ್ಲವೂ ಅತ್ಯುನ್ನತವಾಗಿರುವುವೋ ಅಲ್ಲಿ ಮಾತ್ರ ಪ್ರತಿಭಾವಂತರ ನೈತಿಕ ಅಥವಾ ಬೌದ್ಧಿಕ ಶಕ್ತಿಗಳು ಅತ್ಯಂತ ಹೆಚ್ಚಿನ ಮಟ್ಟದಲ್ಲಿರಲು ಸಾಧ್ಯವಾಗುವುದು. ಮಾನವನನ್ನು ಸ್ವಲ್ಪ ಸ್ವಲ್ಪವಾಗಿ ಅನಾಗರಿಕತೆಯಿಂದ ದೇವತ್ವದ ಹತ್ತಿರಕ್ಕೆತ್ತಿರುವ

ಕ್ರೈಸ್ತ ಮತಗಳ, ಸಂತಶ್ರೇಷ್ಠರ ಮತ್ತು ಇತರ ಸಾಧುವರ್ಯರ ಆಧ್ಯಾತ್ಮಿಕ ಮತ್ತು ಬೌದ್ಧಿಕ ಸಾಧನೆಗಳು ನಮ್ಮೆಲ್ಲರಿಂದಲೂ ಆಗದಿರಬಹುದು. ಆದರೆ ನಮ್ಮ ಶಕ್ತಿ ಇರುವಷ್ಟು ಮಟ್ಟಿಗೆ ನಮ್ಮ ಮನಸ್ಸನ್ನು ಕಾರ್ಯೋನ್ಮುಖ ಗೊಳಿಸಿಕೊಂಡು ನಮಗೆ ದೊರೆತ ಅವಕಾಶಗಳನ್ನು ಇತರರಿಗೆ ಹಂಚಲು ಪ್ರಾಮಾಣಿಕವಾಗಿ ಪ್ರಯತ್ನಿಸುವುದು ನಾವೆಲ್ಲರೂ ಮಾಡಬಹುದಾದ ಕೆಲಸ. ಯಾವುದರ ವಾಹಕ ಶಕ್ತಿ ಮತ್ತು ವಿನ್ಯಾಸವನ್ನು ಅವಲಂಬಿಸಿ ಮಾನವ ಜನಾಂಗದ ವೈಭವಪೂರ್ಣವಾದ ನೌಕಾಯಾನ ಯಶಸ್ವಿಯಾಗಿ ಸಾಗಬಲ್ಲದೋ ಆ ಉಬ್ಬರವನ್ನು ಪೋಷಿಸಲು ಇಂತಹ ಕೆಲಸ ನೆರವಾಗ ಬಹುದು.'

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಮೇಲೆ ಸೂಚಿಸಿದ ಎರಡೂ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಕಾರ್ಯತತ್ಪರವಾಗಿದೆ. ನೂರನ್ನೂ ಮೀರಿದ ತನ್ನ ಪ್ರೌಢ ಪ್ರಕಟಣೆಗಳು ಮತ್ತು ಜನಪ್ರಿಯವಾದ ಪ್ರಚಾರ ಪುಸ್ತಿಕೆಗಳ ಮೂಲಕ ಜ್ಞಾನದಾನವನ್ನು ಹೆಚ್ಚು ಹೆಚ್ಚು ಸಂಖ್ಯೆಯ ಜನರಿಗೆ ಅದು ನೀಡುತ್ತಿದೆ.'' ಇದೀಗ ಪ್ರಸಾರಾಂಗ ಹೊಸದೊಂದು ಯೋಜನೆಯನ್ನು ಕೈಗೊಂಡಿದೆ. ಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ಪರಿಣತರಾದವರಿಂದ ಪುಸ್ತಕಗಳನ್ನು ಬರೆಯಿಸಿ ''ಗೃಹಸರಸ್ವತೀ ಗ್ರಂಥಮಾಲೆ'' ಎಂದು ಕರೆಯುವ ಮಾಲಿಕೆಯಲ್ಲಿ ಪ್ರಕಟಿಸಲು ಉದ್ದೇಶಿಸಿದೆ. ಈ ಪುಸ್ತಕಗಳು ಪ್ರಚಾರ ಪುಸ್ತಕ ಮಾಲೆಯ ಪುಸ್ತಕಗಳಿಗಿಂತ ದೊಡ್ಡವಾಗಿರುತ್ತವೆ. ಸುಮಾರು ೧೨೫ ರಿಂದ ೧೫೦ ಪುಟಗಳಿಂದ ಕೂಡಿರುತ್ತವೆ. ವ್ಯಾಪಕವಾದ ಜ್ಞಾನದ ವಿವಿಧ ಶಾಖೋಪಶಾಖೆಗಳನ್ನು ಅವು ಒಳಗೊಳ್ಳುತ್ತವೆ. ಸುಸಂಸ್ಕೃತ ವ್ಯಕ್ತಿಗೆ ಅತ್ಯಗತ್ಯವಾದ ತಿಳಿವಿನ ಎಲ್ಲಾ ವಿಭಾಗಗಳನ್ನೂ ಅವು ಒಳಗೊಳ್ಳುತ್ತವೆ. ಉನ್ನತ ಶಿಕ್ಷಣವನ್ನು ಪಡೆಯುವ ಅವಕಾಶವನ್ನು ಹೊಂದದ ಸಾಮಾನ್ಯ ಜನರ ಜ್ಞಾನ ತೃಷೆಯನ್ನು ತೃಪ್ತಿಗೊಳಿಸುವುದು, ಇನ್ನೂ ಓದಬೇಕೆಂಬ ಆಸೆಯನ್ನು ಅವರಲ್ಲಿ ಕೆರಳಿಸುವುದು ಈ ಪುಸ್ತಕಗಳ ಗುರಿ. ಶಾಲಾಕಾಲೇಜುಗಳಲ್ಲಿ ಪೂರ್ಣಾವಧಿಯ ಶಿಕ್ಷಣ ಏನನ್ನು ಸಾಧಿಸುತ್ತದೆಯೋ ಅದನ್ನೇ ಅಲ್ಪ ಪ್ರಮಾಣದಲ್ಲಿ ಮನೆ ಮನೆಯಲ್ಲಿ ಈ ಪುಸ್ತಕಗಳು ಸಾಧಿಸುತ್ತವೆ—ಇಂಗ್ಲಿಷಿನಲ್ಲಿರುವ ''ಹೋಂ ಯೂನಿವರ್ಸಿಟಿ

ಲೈಬ್ರರಿ'' ಮಾಲಿಕೆಯ ಪುಸ್ತಕಗಳ ಹಾಗೆ ಆಧುನಿಕ ಕಾಲದ ವಿಶ್ವವಿದ್ಯಾನಿಲಯವೆಂದರೆ ಒಳ್ಳೆಯ ಗ್ರಂಥ ಭಂಡಾರ ಎಂಬ ಕಾರ್ಲೈಲನ ಉಕ್ತಿಯನ್ನು ಅವು ಸಾರ್ಥಕ ಪಡಿಸುತ್ತವೆ. ಜನ ಸರಸ್ವತಿಯಿರುವೆಡೆಗೆ ಬರದೆ ಅಥವಾ ಬರಲಾರದೆ ಹೋದಾಗ ಸರಸ್ವತಿಯೇ ಜನರಿರುವೆಡೆಗೆ ಹೋಗಬೇಕು ಎಂದು ಸ್ವಾಮಿ ವಿವೇಕಾನಂದರು ಎಪ್ಪತ್ತೈದು ವರ್ಷಗಳಿಗೂ ಹಿಂದೆಯೇ ಹೇಳಿದರು. ಆ ಮಾತು ಇಂದೂ ಸಲ್ಲುತ್ತದೆ. ಗೃಹಸರಸ್ವತೀ ಗ್ರಂಥಮಾಲೆ ನಾಡಿನ ಗೃಹಸ್ಥರ ಮನೆಗಳತ್ತ ದೇವಿ ಶಾರದೆ ಇಡುವ ಪವಿತ್ರ ಹೆಜ್ಜೆಗಳನ್ನು ಪ್ರತಿನಿಧಿಸುತ್ತದೆ. ಅವಳ ಗಮನದ ಗುರಿ ಕನ್ನಡನಾಡಿನ ಅಣ್ಣತಮ್ಮಂದಿರ, ಅಕ್ಕತಂಗಿಯರ, ಜ್ಞಾನಾರ್ಜನೆಗೆ ಸಾಕಷ್ಟು ಕಾಲವಾಗಲಿ ಅವಕಾಶವಾಗಲಿ ಇಲ್ಲದಿದ್ದರೂ ''ಜಗತ್ತಿನಲ್ಲಿ ಬಂದಿರುವ ಅತ್ಯುತ್ತಮವಾದ ಆಲೋಚನೆಗಳನ್ನೂ ಉಕ್ತಿಗಳನ್ನೂ'' ಅರಿಯಲು ಆಸಕ್ತಿಯನ್ನು ಹೊಂದಿರುವವರ ಮನೆಗಳು.

ಗೃಹ ಸರಸ್ವತೀ ಗ್ರಂಥಮಾಲೆಗಾಗಿ ನಾಡಿನ ಪ್ರಮುಖ ವಿದ್ವಾಂಸರುಗಳನ್ನು ಪುಸ್ತಕಗಳನ್ನು ಬರೆದುಕೊಡುವಂತೆ ಕೇಳಿಕೊಂಡಾಗ ಈ ಕೆಳಗಿನ ಸೂಚನೆಗಳನ್ನು ಅವರಿಗೆ ನೀಡಲಾಯಿತು :

೧. ಪುಸ್ತಕವು ಕ್ರೌನ್ ಅಷ್ಟಪತ್ರಾಕಾರದ ೧೨೫ ರಿಂದ ೧೫೦ ಪುಟಗಳಷ್ಟು ಇರಬೇಕು.

೨. ಸುಮಾರಾಗಿ ಎಸ್. ಎಸ್. ಎಲ್. ಸಿ. ವರೆಗೆ ಓದಿರುವ ಸಾಮಾನ್ಯರ ತಿಳಿವಿಗೆ ನಿಲುಕುವಂತಿರಬೇಕು.

೩. ಸಾಹಿತ್ಯ ವಿಚಾರಗಳನ್ನು ಕುರಿತು ಬರೆಯುವಾಗ

(ಅ) ಕೇವಲ ಪ್ರೌಢ ವಿದ್ವಾಂಸರಿಗೆ ಆಸಕ್ತಿಯಿರುವ ಕಾಲ ವಿಚಾರ, ಮೂಲಗಳು, ತಂತ್ರಗಳು ಮುಂತಾದ ವಿವರಗಳನ್ನು ಬಿಟ್ಟುಬಿಡಬಹುದು.

(ಆ) ಕೃತಿಯಲ್ಲಿ ಎದ್ದು ಕಾಣುವ ಸಾಹಿತ್ಯಕ ಮೌಲ್ಯಗಳನ್ನೂ ಅದರ ವಿಶಿಷ್ಟ ಕೊಡುಗೆಯನ್ನೂ ಒತ್ತಿಹೇಳಬೇಕು.

೪. ಲೇಖಕರನ್ನು ಕುರಿತು ಬರೆಯುವಾಗ :

(ಅ) ಅವರ ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯನ್ನು ಸ್ಥೂಲವಾಗಿ ಚಿತ್ರಿಸಬೇಕು.

(ಆ) ಅವರ ಜೀವನಚರಿತ್ರೆಯನ್ನು ಸಂಗ್ರಹವಾಗಿ ನಿರೂಪಿಸಬೇಕು.

(ಇ) ಅವರ ಕೃತಿಗಳ ಸಂಕ್ಷಿಪ್ತ ತಾತ್ಪರ್ಯವನ್ನು ಕೊಡಬೇಕು.

(ಈ) ಕೃತಿಗಳ ವಿಮರ್ಶಾತ್ಮಕ ಮೌಲ್ಯ ಮಾಪನ ಇರಬೇಕು.

(ಉ) ಲೇಖಕರ ಮುಖ್ಯ ಕೃತಿಗಳ ಮತ್ತು ಅವುಗಳನ್ನು ಕುರಿತ ಕೃತಿಗಳ ಪಟ್ಟಿ ಇರಬೇಕು.

೫. ವಿಜ್ಞಾನ ಮತ್ತು ಕಲಾ ವಿಭಾಗದ ಪುಸ್ತಕಗಳನ್ನು ಬರೆಯುವಾಗ

(ಅ) ಜಟಿಲವೂ, ತಾಂತ್ರಿಕವೂ ಆದ ಅಂಶಗಳನ್ನು ನಿವಾರಿಸಬೇಕು.

(ಆ) ಚಾರಿತ್ರಿಕ ಮತ್ತು ಸಾಮಾಜಿಕ ಪ್ರಜ್ಞೆ, ವೈಜ್ಞಾನಿಕ ಮನೋಭಾವ ಮತ್ತು ವೈಜ್ಞಾನಿಕ ಚಿಂತನೆ ಇವುಗಳ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡು ವಿಜ್ಞಾನದ ವಿಚಾರಗಳನ್ನು ವಿಸ್ತರಿಸಿ ಹೇಳಬೇಕು.

ಈ ಸೂಚನೆಗಳಿಗನುಸಾರವಾಗಿ ಲೇಖಕರು ಗೃಹಸರಸ್ವತೀ ಗ್ರಂಥಮಾಲೆಯ ಪುಸ್ತಕಗಳನ್ನು ಬರೆಯಲು ಪ್ರಯತ್ನಿಸಿದ್ದಾರೆ. ಕನ್ನಡನಾಡಿನ ಜನಕೋಟಿ ಈ ನೂತನ ಮಾಲೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿ, ಅದರ ಪೂರ್ಣ ಪ್ರಯೋಜನವನ್ನು ಪಡೆಯುತ್ತಾರೆಂದು ಆಶಿಸಲಾಗಿದೆ.

ಈ ಮಾಲೆಯಲ್ಲಿ ಈಗ ಹೊರಬರುತ್ತಿರುವ ಡಾ|| ಎಚ್. ಡಿ. ಚಂದ್ರಪ್ಪಗೌಡ ಅವರ "ವೈದ್ಯ ವಿಜ್ಞಾನ ಸಾಧಕರು" ವಾಚಕರಿಗೆ ಹೆಚ್ಚು ಪ್ರಿಯವಾಗುತ್ತದೆ ಎಂದು ಆಶಿಸುತ್ತೇನೆ.

ಕೆ. ಟಿ. ವೀರಪ್ಪ
ನಿರ್ದೇಶಕ

# ಮುನ್ನುಡಿ

ಪ್ರಾಚ್ಯ ಪಾಶ್ಚಾತ್ಯ ಶಿಕ್ಷಣ ತಜ್ಞರು ಕೂಲಂಕಷವಾಗಿ ವಿಚಾರ ನಡೆಸಿ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎಂದು ಒಮ್ಮತದ ತೀರ್ಮಾನ ನೀಡಿರುವುದು ಸರ್ವವಿದಿತವಾಗಿದೆ. ಈ ನಿರ್ಧಾರವನ್ನು ಕೈಗೊಳ್ಳುವುದರಿಂದ ಮಾತ್ರವೇ ವಿದ್ಯಾಭ್ಯಾಸಕ್ಕೆ ಉಜ್ವಲವಾದ ಭವಿಷ್ಯವಿದೆ ಎಂಬುದನ್ನು ಮನಗಂಡ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ನಿಟ್ಟಿನಲ್ಲಿ ದಿಟ್ಟತನದಿಂದ ಹೆಜ್ಜೆಯಿಡುತ್ತಿವೆ. ಕೇಂದ್ರ ಸರಕಾರವು ಪ್ರಾದೇಶಿಕ ಭಾಷೆಗಳಲ್ಲಿ ಪಠ್ಯಪುಸ್ತಕಗಳು, ಸಹಾಯಕ ಗ್ರಂಥಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಲಿ ಎಂಬ ಆಶಯದಿಂದ ಪ್ರತಿಯೊಂದು ರಾಜ್ಯ ಸರಕಾರದ ಮೂಲಕ ಅಲ್ಲಿನ ವಿಶ್ವವಿದ್ಯಾನಿಲಯಗಳಿಗೆ ಒಂದು ಕೋಟಿ ರೂಪಾಯಿಗಳ ಸಹಾಯಧನವನ್ನು ನೀಡುವ ತೀರ್ಮಾನವನ್ನು ಕೈಗೊಂಡಾಗಿದೆ. ಈ ಹಣದ ವಿತರಣ ಕಾರ್ಯವೂ ಪ್ರಾರಂಭವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಕಳೆದ ಅನೇಕ ದಶಕಗಳಿಂದಲೂ ಈ ದಿಕ್ಕಿನಲ್ಲಿ ಗಣನೀಯವಾದ ಸಾಧನೆ ನಡೆಸಿದೆ. ಇಲ್ಲಿನ ಅನೇಕ ಕಾಲೇಜುಗಳಲ್ಲಿ ಅನೇಕ ವರ್ಷಗಳ ಹಿಂದೆಯೇ ಕನ್ನಡ ಮಾಧ್ಯಮ ತೆರೆಯಲಾಯಿತು. ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಮಾಧ್ಯಮ ಆರಿಸಿಕೊಂಡು ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗಿಂತಲೂ ಉನ್ನತ ಮಟ್ಟದ ಪರಿಣತಿ ಪಡೆಯುವುದು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಮೈಸೂರಿನ ಒಂದು ಕಾಲೇಜಿನಲ್ಲಿ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಿದ ವರ್ಷವೇ ಅದನ್ನು ಆರಿಸಿಕೊಂಡವರಲ್ಲಿ ನೂರಕ್ಕೆ ನೂರು ಜನ ತೇರ್ಗಡೆ ಹೊಂದಿದರು ಎಂಬುದನ್ನು ನೆನೆಯುವುದರಲ್ಲಿ ಹೆಚ್ಚಿನ ವಿವೇಕವಿದೆ. ಅದರ ಮರುವರ್ಷದಿಂದಲೂ ಆ ಕಾಲೇಜಿನ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಶೇಕಡ ೯೦ಕ್ಕೆ ಕಡಿಮೆಯಿಲ್ಲದಂತೆ ತೇರ್ಗಡೆ ಹೊಂದುತ್ತಲೇ ಬಂದಿದ್ದಾರೆ. ಅದೇ ಕಾಲೇಜಿನಲ್ಲಿ ಇಂಗ್ಲಿಷ್ ಮಾಧ್ಯಮ ಆರಿಸಿಕೊಂಡವರು ಶೇಕಡ ಮೂವತ್ತು ಮೂವತ್ತೈದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ತೇರ್ಗಡೆ ಹೊಂದುತ್ತಿಲ್ಲ ಎಂಬುದೂ ಗಮನಿಸಬೇಕಾದ ವಿಷಯ.

ಈಗಂತೂ ವಿಶ್ವವಿದ್ಯಾನಿಲಯದ ಮೊದಲನೆಯ ತರಗತಿಯಿಂದ ಹಿಡಿದು ಎಂ.ಎ., ಎಂ.ಎಸ್ಸಿ., ಮುಂತಾದ ಸ್ನಾತಕೋತ್ತರ ತರಗತಿಯ ವರೆಗೂ ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು, ಅವರು ಯಾವುದೇ ಭಾಷೆಯ ಮೂಲಕ ಶಿಕ್ಷಣ ಪಡೆದಿದ್ದರೂ, ಕನ್ನಡದಲ್ಲಿ ಉತ್ತರ ಬರೆಯಬಹುದು ಎಂದು ವಿಶ್ವವಿದ್ಯಾನಿಲಯ ಅಪ್ಪಣೆ ಹೊರಡಿಸಿದೆ. ಅದರ ಪ್ರಕಾರ ಕೆಲವು ವಿದ್ಯಾರ್ಥಿಗಳು ಸ್ನಾತಕೋತ್ತರ ಪರೀಕ್ಷೆಗಳಲ್ಲೂ ಕನ್ನಡದಲ್ಲೇ ಉತ್ತರ ಬರೆದು ಪ್ರಶಂಸನೀಯವಾದ ಫಲಿತಾಂಶವನ್ನು ತೋರಿಸುತ್ತಿದ್ದಾರೆ.

ಪಠ್ಯಪುಸ್ತಕಗಳ ಅಭಾವ ಎಂಬುದು ಹಳಸಿದ ಮಾತಾಗಿ ಪರಿಣಮಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಅನೇಕ ಪಠ್ಯಪುಸ್ತಕಗಳನ್ನು ವಿದ್ವಾಂಸರಿಂದ ಬರೆಸಿ ಪ್ರಕಟಿಸಿದೆ. ಈ ಮಹೋನ್ನತ ಕಾರ್ಯದಲ್ಲಿ ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವ ವಿದ್ಯಾನಿಲಯಗಳು ಹಿಂದೆಂದೂ ಕಾಣದ ಭವ್ಯ ಪ್ರಮಾಣದಲ್ಲಿ ಕಾರ್ಯೋನ್ಮುಖವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಈಗಾಗಲೇ ನೂರಾರು ಸ್ನಾತಕ ಮತ್ತು ಸ್ನಾತಕೋತ್ತರ ಮಟ್ಟದ ಪಠ್ಯಪುಸ್ತಕಗಳನ್ನೂ, ಸಹಾಯಕ ಗ್ರಂಥಗಳನ್ನೂ ನೂರಾರು ಜನ ಘನ ವಿದ್ವಾಂಸರ ನೆರವಿನಿಂದ ಸೃಷ್ಟಿಸುತ್ತಿದೆ. ಇತರ ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳೂ ಇಂತಹ ಒಂದು ಶ್ಲಾಘನೀಯವಾದ ಉದ್ಯಮದಲ್ಲಿ ತೊಡಗಿವೆ. ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವೂ ಈ ನಿಟ್ಟಿನಲ್ಲಿ ಕಾರ್ಯವನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹವಾಗಿದೆ.

ಮಹಾತ್ಮಾ ಗಾಂಧೀಜಿಯವರು—ಭಾರತದ ಜನಕೋಟಿಯೊಂದಿಗೆ ಮತ್ತು ಅವರ ಸಮಸ್ಯೆಗಳೊಂದಿಗೆ ಅವರಷ್ಟು ನಿಕಟವಾದ ಪರಿಚಯವನ್ನು ಹೊಂದಿ, ಅವರಿಗಾಗಿಯೇ ಬಾಳಿದ ಶಿಕ್ಷಣ ತಜ್ಞರು ಮತ್ತೊಬ್ಬರಿರಲಾರರು. —ತಮ್ಮ ಖಡ್ಗತೀಕ್ಷ್ಣವೂ ತರ್ಕಬದ್ಧವೂ ಆದ ವಾಣಿಯಲ್ಲಿ ಸಾರಿ ಸಾರಿ ಹೇಳಿದರು : ದೇಶಭಾಷೆಗಳು ಶಿಕ್ಷಣ ಮಾಧ್ಯಮವಾದಾಗಲೇ ಭಾರತದಲ್ಲಿ ವಿದ್ಯಾಭ್ಯಾಸ ಅರ್ಥಪೂರ್ಣವಾಗುತ್ತದೆ ಎಂದು. ಅವರ ಈ ಕೆಲವು ಮಾತುಗಳನ್ನು ಪರಿಭಾವಿಸಬೇಕು :

"...ಗಣಿತ, ರೇಖಾಗಣಿತ, ಬೀಜರೇಖಾಗಣಿತ, ರಸಾಯನಶಾಸ್ತ್ರ,

ಖಗೋಳಶಾಸ್ತ್ರ—ಈ ವಿಷಯಗಳಲ್ಲಿ ಎಷ್ಟನ್ನು ನಾನು ನಾಲ್ಕು ವರ್ಷಗಳಲ್ಲಿ ಕಲಿತೆನೋ ಅಷ್ಟನ್ನು ಒಂದು ವರ್ಷದಲ್ಲಿ ಕಲಿಯಬಹುದಾಗಿತ್ತು. ಇಂಗ್ಲಿಷಿನ ಮೂಲಕವಾಗಿಯೇ ಕಲಿಯದೆ ಗುಜರಾತಿಯ ಮೂಲಕ ಕಲಿತಿದ್ದರೆ, ನಾನು ಆ ವಿಷಯಗಳನ್ನು ಗ್ರಹಿಸುವುದು ಇನ್ನೂ ಸುಲಭವಾಗುತ್ತಿತ್ತು; ವಿಶದವಾಗುತ್ತಿತ್ತು; ನನ್ನ ಗುಜರಾತಿ ಶಬ್ದಭಂಡಾರ ಇನ್ನೂ ವಿಪುಲವಾಗಿರುತ್ತಿತ್ತು ; ನಾನು ಆ ಜ್ಞಾನವನ್ನು ಮನೆಯಲ್ಲಿ ಉಪಯೋಗಿಸಿಕೊಳ್ಳಬಹುದಾಗಿತ್ತು ಎಂದು ಈಗ ತಿಳಿದುಕೊಂಡಿದ್ದೇನೆ. ಈ ಇಂಗ್ಲಿಷ್ ಮಾಧ್ಯಮ ನನಗೂ ಇಂಗ್ಲಿಷ್ ಶಾಲೆಗಳಲ್ಲಿ ಓದದೆ ಇದ್ದ ನನ್ನ ಮನೆಯವರಿಗೂ ನಡುವೆ ದಾಟಲಾಗದ ಅಡ್ಡಗೋಡೆಯನ್ನು ಹಾಕಿತು...... ನನ್ನ ಮನೆಯಲ್ಲಿಯೇ ನಾನು ಬಲು ಬೇಗನೆ 'ಪರಕೀಯ' ನಾಗುತ್ತಲಿದ್ದೆ.''

"... ..ಶಿಕ್ಷಣ ಮಾಧ್ಯಮವನ್ನು ಕೂಡಲೇ, ಎಷ್ಟೇ ವೆಚ್ಚವಾಗಲಿ, ಬದಲಾಯಿಸಿ ಪ್ರಾಂತೀಯ ಭಾಷೆಗಳಿಗೆ ಸರಿಯಾದ ಸ್ಥಾನವನ್ನು ಕೊಡಬೇಕು. ಇದರಿಂದ ಉನ್ನತ ಶಿಕ್ಷಣದಲ್ಲಿ ಸಂಭವಿಸುತ್ತದೆ ಎಂದು ಹೇಳಲಾಗುತ್ತಿರುವ ತಾತ್ಕಾಲಿಕ ಗೊಂದಲವನ್ನೂ ಕೂಡ, ಪ್ರತಿದಿನವೂ ಅಧಿಕವಾಗುತ್ತಿರುವ ದೋಷಯುಕ್ತ ಅಪವ್ಯಯಕ್ಕೆ ಬದಲಾಗಿ, ಸ್ವಾಗತಿಸುತ್ತೇನೆ ''

ಮಹಾತ್ಮಾಗಾಂಧೀಜಿಯವರ ಅನೇಕ ರಾಷ್ಟ್ರಹಿತ ಯೋಜನೆಗಳನ್ನು ಮೂಲೆಗುಂಪು ಮಾಡಿ ದೇಶಕ್ಕೆ ಹಾನಿಯನ್ನು ತರುತ್ತಿರುವ ವಿದ್ರೋಹಿಗಳಾದ ಅನೇಕರು ಅವರ ಈ ದೇಶಭಾಷಾ ಮಾಧ್ಯಮದ ಯೋಜನೆಯನ್ನೂ ಮೂಲೆಗೊತ್ತರಿಸಿದ್ದಾರೆ. ಅದಕ್ಕೆ ಅವರು ಒಡ್ಡುವ ವಾದಗಳು ಹಾಸ್ಯಾಸ್ಪದವಾಗಿವೆ. "ದೇಶಭಾಷೆಗಳಲ್ಲೇ ಶಿಕ್ಷಣ ದೊರೆತರೆ ನಮಗೆ ಪರಪ್ರಾಂತ್ಯಗಳಲ್ಲಿ ಕೆಲಸ ಸಿಕ್ಕುವುದು ಹೇಗೆ?'' ಇದು ಅಂಥವರ ಪ್ರಶ್ನೆಗಳಲ್ಲಿ ಒಂದು. ಇಲ್ಲಿಂದ ಪರಪ್ರಾಂತಗಳಿಗೆ ಹೋಗಿಯೋ, ಪರಪ್ರಾಂತಗಳಿಂದ ಇಲ್ಲಿಗೆ ಬಂದೋ ಹಿಂದೆ ಉದ್ಯೋಗ ದೊರಕಿಸಿಕೊಂಡವರು ಹಲವರು, ಆದರೆ ಅವರಿಗೆ ಉದ್ಯೋಗ ಸಿಕ್ಕಿದ್ದು ಅವರ ಇಂಗ್ಲಿಷ್ ಜ್ಞಾನಕ್ಕಾಗಿಯಲ್ಲ, ಅವರಿಗಿದ್ದ ತಾಂತ್ರಿಕ ಮತ್ತಿತರ ವಿಶೇಷ ಜ್ಞಾನಕ್ಕಾಗಿ ಎಂಬುದನ್ನು ಅಂಥವರು ಮರೆಯುತ್ತಾರೆ. ಆಗಲೂ ಇವರು ತಮ್ಮ ಮೇಲಾಧಿಕಾರಿ

ಗಳೊಂದಿಗೂ, ಕೈಕೆಳಗಿನ ಅಧಿಕಾರಿಗಳೊಂದಿಗೂ ವ್ಯವಹಾರಕ್ಕಾಗಿ ಬಳಸುತ್ತಿದ್ದ ಭಾಷೆ ಇಂಗ್ಲಿಷ್ ಅಲ್ಲ ಎಂಬುದನ್ನು ಮರೆಯಬಾರದು. ಯಾವ ಪ್ರಾಂತದಲ್ಲಿ ಇವರು ಕೆಲಸ ಮಾಡುತ್ತಿದ್ದರೋ ಆ ಪ್ರಾಂತಭಾಷೆಯನ್ನು ಮಾತಾಡುವ ಮಟ್ಟಿಗಾದರೂ ಇವರು ಕಲಿಯಬೇಕಾಗಿತ್ತು. ಹಾಗೆ ಅವರು ಕಲಿತ ಭಾಷೆಗಳಿಂದಲೇ ಅವರ ದಿನನಿತ್ಯದ ವ್ಯವಹಾರ ಸಾಗುತ್ತಿರುವುದು ಮತ್ತು ಅವರ ತಾಂತ್ರಿಕ ಜ್ಞಾನದ ಸರಿಯಾದ ವಿನಿಯೋಗವೂ ನಡೆಯುತ್ತಿರುವುದು. ಇಷ್ಟಾದರೂ ಹೀಗೆ ಹೊರಗೆ ಹೋದ ಜನ ದೇಶಭಾಷಾ ಮಾಧ್ಯಮದ ವಿರುದ್ಧವಾಗಿ ಮಾತನಾಡುತ್ತಿರುವುದು ಅತ್ಯಂತ ಆಶ್ಚರ್ಯಕರವಾಗಿದೆ.

ಇಷ್ಟಕ್ಕೂ ಹೀಗೆ ಹೊರಗೆ ಹೋಗುತ್ತಿರುವ ತಜ್ಞರ ಸಂಖ್ಯೆಯಾವರೂ ಎಷ್ಟು? ಬಹುಶಃ ಶೇಕಡ ಒಂದಕ್ಕಿಂತಲೂ ಕಡಿಮೆ. ಹೀಗೆ ನೂರರಲ್ಲಿ ಒಬ್ಬ "ಪ್ರತಿಭಾವಂತ" ನ ಸಲುವಾಗಿ ತೊಂಬತ್ತೊಂಬತ್ತು ಜನರಿಗೆ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕು ಎಂಬುದು ಖಂಡನಾರ್ಹ.

ಈ ಸಂದರ್ಭದಲ್ಲಿಯೇ ಇನ್ನೂ ಕೆಲವು ಸಂದೇಹಗಳನ್ನು ನಿವಾರಿಸುವುದು ಅಗತ್ಯ. ತ್ರಿಭಾಷಾ ಸೂತ್ರ ಎಂಬುದು, ನಾನು ಹಿಂದೆಯೇ ಅನೇಕ ಕಡೆ ಹೇಳಿರುವಂತೆ ಭಾರತೀಯರಿಗೆ ತ್ರಿಶೂಲಪ್ರಾಯವಾಗುತ್ತದೆ. ಎಲ್ಲರಿಗೂ ಎಲ್ಲ ಭಾಷೆಗಳೂ ಬೇಕಾಗಿಲ್ಲ. ಆದರೆ, ಎಲ್ಲರೂ ಇಂಗ್ಲಿಷನ್ನಾಗಲಿ ಹಿಂದಿಯನ್ನಾಗಲಿ ಕಲಿಯಬೇಕಾದುದು ಏಕೆ? ಯಾರಿಗೆ ಅಗತ್ಯವಿದೆಯೋ ಅಂಥವರು ಅವರಿಗೆ ಅಗತ್ಯವಿರುವ ಭಾಷೆಯನ್ನು ಕಲಿಯಬಹುದು. ಇಂತಹ ಭಾಷೆಗಳನ್ನು ಶೀಘ್ರವಾಗಿ ಸಾಹಿತ್ಯ ದೃಷ್ಟಿಯಿಂದಲ್ಲದೆ ಭಾಷಾ ದೃಷ್ಟಿಯಿಂದ ಬೋಧಿಸುವ ಕಾರ್ಯಕ್ಕಾಗಿ ಭಾಷಾ ಸಂಸ್ಥೆಗಳ ಸ್ಥಾಪನೆಯಾಗಿದೆ. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಆಗಲಿವೆ. ಅಲ್ಲದೆ ತ್ರಿಭಾಷಾ ಸೂತ್ರವೇ ಏಕೆ? ಭರತ ಖಂಡಕ್ಕೀಗ ಬೇಕಾಗಿರುವುದು ಬಹುಭಾಷಾ ಸೂತ್ರ. ನಮ್ಮ ಜನ ಕಲಿಯಬೇಕಾಗಿರುವುದು ಇಂಗ್ಲಿಷ್ ಭಾಷೆಯೊಂದನ್ನು ಮಾತ್ರವಲ್ಲ, ರಷ್ಯನ್. ಜಪಾನಿ, ಜರ್ಮನ್, ಫ್ರೆಂಚ್

ಮುಂತಾದ ಅನೇಕ ಪ್ರೌಢ ಭಾಷೆಗಳನ್ನೂ ವೈಜ್ಞಾನಿಕ ಆವಶ್ಯಕತೆಗಳಿಗಾಗಿ ಕಲಿಯಬೇಕಾಗಿದೆ.

ತ್ರಿಭಾಷಾಸೂತ್ರದ ಅಪಾಯ ಇಷ್ಟಕ್ಕೇ ಸೀಮಿತವಾಗಿಲ್ಲ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ರಾಜಕೀಯ ಕಾರಣಗಳಿಗಾಗಿ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ವೈಭವವನ್ನು ಏನೂ ಅರಿಯದ ನಮ್ಮ ಹಸುಳೆಗಳ ಮುಂದೆ ವರ್ಣಿಸಿ ಅವರ ಮನಸ್ಸನ್ನು ಅವುಗಳ ಕಡೆಗೇ ಎಳೆದು ದೇಶಭಾಷೆಗಳ ಅಧ್ಯಯನವನ್ನು ಹಿಂದಕ್ಕೊತ್ತರಿಸುವ ಪ್ರಯತ್ನವನ್ನೂ ಮಾಡುತ್ತಿರುವವರು ಅನೇಕರಿದ್ದಾರೆ.

ನನ್ನ ವಾದ ಇದು : ತ್ರಿಭಾಷಾ ಸೂತ್ರ ಎಂಬುದು ಭರತ ಖಂಡಕ್ಕೆ ಅತ್ಯಂತ ಅಪಾಯಕಾರಿಯಾದುದು. ಅದರ ಸ್ಥಾನದಲ್ಲಿ ಬರಬೇಕಾದದ್ದು ದ್ವಿಭಾಷಾ ಸೂತ್ರ. ಭರತ ಖಂಡದ ಯಾವ ವಿದ್ಯಾರ್ಥಿಯ ಮೇಲೂ ಯಾವ ಭಾಷೆಯನ್ನೂ ಬಲವಂತವಾಗಿ ಹೇರಬಾರದು ಎಂಬುದು ನನ್ನ ವಾದದ ಸಾರಾಂಶ. ಮೇಲೆ ಸೂಚಿಸಿದಂತೆ ಪ್ರಪಂಚದಲ್ಲಿ ನಡೆಯುತ್ತಿರುವ ವಿಜ್ಞಾನ ಮತ್ತು ತಾಂತ್ರಿಕ ಪ್ರಗತಿಯ ಅರಿವಿಗೆ ಇಂಗ್ಲಿಷ್ ಭಾಷೆಯ ಜ್ಞಾನವೊಂದೇ ಸಾಲದು. ಜರ್ಮನ್, ರಷ್ಯನ್ ಮುಂತಾದ ಭಾಷೆಗಳನ್ನೂ ನಮ್ಮ ವಿದ್ಯಾರ್ಥಿಗಳು ಕಲಿಯಬೇಕಾದದ್ದು ಅಗತ್ಯ. ಆದ್ದರಿಂದ ಅನೇಕ ಭಾಷೆಗಳನ್ನು ವಿದ್ಯಾರ್ಥಿಗಳ ಮುಂದೆ ಇಟ್ಟು, ಅವರು ಯಾವುವಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳುವ ಅವಕಾಶವನ್ನು ನೀಡಬೇಕು.

ಶೈಕ್ಷಣಿಕ ದೃಷ್ಟಿಯಿಂದ ಮಾತ್ರವಲ್ಲದೆ ರಾಜಕೀಯವಾಗಿಯೂ ದ್ವಿಭಾಷಾ ಸೂತ್ರವು ತ್ರಿಭಾಷಾ ಸೂತ್ರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಪ್ರದೇಶ ಪ್ರದೇಶಗಳ ನಡುವಣ ಸ್ವಭಾಷಾಭಿಮಾನಜನ್ಯವಾದ ಭಾಷಾ ಸಮಸ್ಯೆಯನ್ನು ಪರಿಹರಿಸುವುದರಲ್ಲಿ ಸಹಾಯಕವಾಗುತ್ತದೆ. ಯಾವುವಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳಬಹುದು ಎನ್ನುವುದರಿಂದ ಹಿಂದಿ ಬೇಡ ಎನ್ನುವವರಿಗೆ, ಇಂಗ್ಲಿಷ್ ಬೇಡ ಎನ್ನುವವರಿಗೆ ಅವುಗಳನ್ನು ಬಲಾತ್ಕಾರವಾಗಿ ಹೇರಿದಂತಾಗುವುದಿಲ್ಲ ; ನಿಷೇಧಿಸಿದಂತೆಯೂ ಆಗುವುದಿಲ್ಲ. ಮಹಾಜನರೇ ಕಾಲಕ್ರಮೇಣ, ತಮ್ಮ ಅಭಿರುಚಿ ಆವಶ್ಯಕತೆಗಳಿಗೆ ತಕ್ಕಂತೆ ಹಿಂದಿ, ಇಂಗ್ಲಿಷ್, ರಷ್ಯನ್, ಸಂಸ್ಕೃತ ಮೊದಲಾದ ಭಾಷೆಗಳನ್ನು

ಯಾವ ಶೇಕಡಾವಾರು ಪ್ರಮಾಣದಲ್ಲಿ ಕಲಿಯಬೇಕೆಂಬುದನ್ನು ತಮಗೆ ತಾವೇ ಗೊತ್ತು ಮಾಡಿಕೊಳ್ಳುತ್ತಾರೆ.

ಹಿಂದಿಯನ್ನಾದರೂ ಐವತ್ತು ಕೋಟಿ ಭಾರತೀಯರೂ ಕಲಿಯಬೇಕು ಎನ್ನುವ ವಾದದಲ್ಲಿ-ಸಾಮ್ರಾಜ್ಯಶಾಹಿಯ ದಬ್ಬಾಳಿಕೆಯ ಮನೋಧರ್ಮವೊಂದನ್ನು ಬಿಟ್ಟರೆ-ಅರ್ಥವಿಲ್ಲ. ಶೇಕಡ ಒಂದರಷ್ಟು ಜನಕ್ಕೆ ಅರ್ಥಂಬರ್ಥ ಇಂಗ್ಲಿಷ್ ಕಲಿಸಿ ಬ್ರಿಟಿಷರು ಇನ್ನೂರು ವರ್ಷಕ್ಕೂ ಮೇಲೆ ಸಮರ್ಥವಾಗಿ ರಾಜ್ಯಭಾರ ನಡೆಸಲಿಲ್ಲವೇ?

ಆದ್ದರಿಂದ "ಬಹುಭಾಷೆಗಳಲ್ಲಿ ದ್ವಿಭಾಷಾ" ಎಂಬುದೇ ನಮಗಿಂದು ಕ್ಷೇಮಕರ ಸೂತ್ರವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯವು ದ್ವಿಭಾಷಾ ಸೂತ್ರವನ್ನು ಅಂಗೀಕರಿಸಿ ಇಡೀ ಭಾರತಕ್ಕೆ ಮಾರ್ಗದರ್ಶನ ನೀಡಿ, ಅಗ್ರೇಸರ ಸ್ಥಾನದಲ್ಲಿ ನಿಂತಿರುವುದು ನಮಗೆಲ್ಲ ಅಭಿಮಾನದ ಸಂಗತಿ.

ಅಧಿಕೃತ ರಾಷ್ಟ್ರ ಭಾಷೆಯ ಪ್ರಶ್ನೆ ಬರುತ್ತವೆ. ಅಖಂಡ ಭಾರತಕ್ಕೆ ಒಂದು ರಾಷ್ಟ್ರ ಭಾಷೆ ಅಗತ್ಯ. ಬಹುಜನರು ಯಾವುದು ರಾಷ್ಟ್ರ ಭಾಷೆಯೆಂದು ತೀರ್ಮಾನಿಸುತ್ತಾರೋ ಅದನ್ನು ವ್ಯವಹಾರದ ಮಟ್ಟಿಗೆ, ಎಲ್ಲರೂ ಅಲ್ಲ, ಅವಶ್ಯವಿದ್ದಷ್ಟು ಜನರು, ಅವರೇ ನಿರ್ಣಯಿಸಿಕೊಂಡಂತೆ, ಕಲಿಯುವುದು ಸೂಕ್ತ. ಆದರೆ ಅದನ್ನು ಕೂಡ ವಿದ್ಯಾರ್ಥಿಗಳ ಆಯ್ಕೆಗೆ ಬಿಡಬೇಕೆಂಬುದೇ ನನ್ನ ಅಭಿಪ್ರಾಯ.

ಇನ್ನೊಂದು ವಾದವನ್ನು ಮುಂದೊಡ್ಡುವ ಜ್ಞಾನಿಗಳ ಒಂದು ಗುಂಪಿದೆ. ಅದು ಒಂದು ಪ್ರಾಂತದ ವಿಶ್ವವಿದ್ಯಾನಿಲಯ ಮತ್ತೊಂದು ಪ್ರಾಂತದ ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ನೇಮಕ ಮಾಡಿಕೊಳ್ಳುವ ವಿಷಯ. ನನ್ನ ವಿಶ್ವವಿದ್ಯಾನಿಲಯದ ಸೇವೆಯ ದೀರ್ಘ ಇತಿಹಾಸದಲ್ಲಿ ಹೊರಗಿನ ವಿಶ್ವವಿದ್ಯಾನಿಲಯಗಳಿಂದ ಇಲ್ಲಿಗೆ ಆಹ್ವಾನಿತರಾದ ಪ್ರತಿಭಾಪುರುಷರ ಸಂಖ್ಯೆ ಕೈಬೆರಳುಗಳಲ್ಲಿ ಎಣಿಸಬಹುದಾದಷ್ಟು. ಇಲ್ಲಿಂದ ಬೇರೆ ವಿಶ್ವವಿದ್ಯಾನಿಲಯಗಳಿಗೆ ಹೋದವರ ಸಂಖ್ಯೆಯೂ ಇದಕ್ಕಿಂತ ಹೆಚ್ಚಿನದಾಗಿರಲಾರದು. ಈಗಂತೂ ಪ್ರತಿಯೊಂದು ಪ್ರಾಂತವೂ ತನ್ನಲ್ಲಿಯ ಪ್ರತಿಭಾಶಾಲಿಗಳಿಗೇ ಉದ್ಯೋಗ ಒದಗಿಸಲು ಅಸಮರ್ಥವಾಗಿರುವಾಗ

ಹೊರ ಪ್ರಾಂತಗಳಿಂದ ಪ್ರತಿಭಾವಂತರನ್ನು ಸ್ವಾಗತಿಸಿ ಅವರನ್ನು ಪೀಠಗಳಲ್ಲಿ ಪ್ರತಿಷ್ಠಾಪಿಸುವ ಮಾತು ಎಲ್ಲಿಂದ ಬಂತು? ಒಂದು ವೇಳೆ ಅಂತಹ ಪ್ರಸಂಗ ಒದಗಿದರೆ ಹೀಗೆ ತಮ್ಮ ತಮ್ಮ ವಿಷಯಗಳಲ್ಲಿ ವಿಶೇಷ 'ಪ್ರತಿಭಾವಂತ' ರಾಗಿರುವವರು ಬೇರೆ ಪ್ರಾಂತದ ಭಾಷೆಯನ್ನು ವ್ಯವಹಾರದ ಮಟ್ಟಿಗಾದರೂ ಶೀಘ್ರವಾಗಿ ಕಲಿತುಕೊಳ್ಳುವ ಶಕ್ತಿಯನ್ನೂ ಪಡೆದೇ ಇರುತ್ತಾರೆ. ಆದುದರಿಂದ ಇಂತಹ ಅಪೂರ್ವ ಪ್ರಸಂಗಗಳನ್ನು ಎದುರಿಸಲು, ಅಂದರೆ ಲಕ್ಷದಲ್ಲಿ ಒಬ್ಬರಿಗೆ ಅನುಕೂಲ ಮಾಡಿಕೊಡಲು ಲಕ್ಷಾಂತರ ಜನರನ್ನು ಇಂಗ್ಲಿಷಿನ ಬಲಿಪೀಠದ ಮೇಲೆ ವಧೆ ಮಾಡುವುದು ಸರಿಯಲ್ಲವೆಂಬುದು ಸ್ಪಷ್ಟ.

ಅಲ್ಲದೆ ಈಗ ವಾದ ಮಾಡುತ್ತಿರುವವರಲ್ಲಿ ಅನೇಕರು ಅರ್ಧ ಶತಮಾನದ ಹಿಂದಿನ ಜ್ಞಾನ. ಐವತ್ತು ವರ್ಷಗಳ ಹಿಂದೆ ನಾವೆಲ್ಲ ವಿದ್ಯಾರ್ಥಿಗಳಾಗಿದ್ದಾಗ ಕೂಡ ಜ್ಞಾನದ ಪ್ರಮುಖ ಶಾಖೆಗಳಿಗೆಲ್ಲ ಪ್ರವೇಶವಿದ್ದದ್ದು ಇಂಗ್ಲಿಷ್ ಭಾಷೆಯ ಮೂಲಕವೇ. ಈಗ ಹಾಗಲ್ಲ. ನನಗೆ ತಿಳಿದಂತೆ ಕನ್ನಡದ ಮೂಲಕವಾಗಿ ಜ್ಞಾನದ ಯಾವ ಶಾಖೆಯನ್ನಾದರೂ ಪರಿಚಯ ಮಾಡಿಕೊಳ್ಳಲಾಗುವಂತೆ ಗ್ರಂಥ ರಚನೆ ಕನ್ನಡದಲ್ಲಿ ನಡೆದಿದೆ. ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಪ್ರಕಟಿಸಲಿರುವ "ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥ ಸೂಚಿ" ಹೊರಬಂದಾಗ ಈ ಮಾತಿನ ಅರ್ಥ ಮನದಟ್ಟಾದೀತು.

ಮಹಾತ್ಮಾ ಗಾಂಧೀಜಿಯವರು ಸಾರಿ ಸಾರಿ ಹೇಳಿದಂತೆ, ಇತರ ಶಿಕ್ಷಣ ತಜ್ಞರು ತರ್ಕಬದ್ಧವಾಗಿ ಮಂಡಿಸಿ ಪ್ರತಿಪಾದಿಸಿದಂತೆ, ದೇಶ ಭಾಷೆಗಳಲ್ಲಿ ಶಿಕ್ಷಣ ದೊರೆಯದಿದ್ದರೆ, ಈಗಾಗುತ್ತಿರುವಂತೆ, ವಿದ್ಯಾಭ್ಯಾಸ ಮರಳಿನ ಮೇಲೆ ಕಟ್ಟಿದ ಸೌಧವಾಗುತ್ತದೆ. ವಿಜ್ಞಾನವನ್ನೂ ತಾಂತ್ರಿಕ ಜ್ಞಾನವನ್ನೂ ಕನ್ನಡದಲ್ಲಿ ಹೇಳಲಾಗುವುದಿಲ್ಲ ಎಂಬುದು ಮಂದಮತಿಗಳ, ಆಲಸ ದುರ್ಬಲರ ಮತ್ತು ವಿದ್ಯಾದ್ರೋಹಿಗಳ ಕನವರಿಕೆ ಮತ್ತು ಅತ್ಯಂತ ಹಾಸ್ಯಾಸ್ಪದವಾದ ತಲೆಹರಟೆ ಎಂಬುದನ್ನು ನಮ್ಮ ವಿದ್ವಾಂಸರು ತಮ್ಮ ಕನ್ನಡ ವೈಜ್ಞಾನಿಕ ಮತ್ತು ಮಾನವಿಕ ಗ್ರಂಥಗಳ ಮೂಲಕ ಸಾರಿ ಹೇಳಿದ್ದಾಗಿದೆ. ಪಾರಿಭಾಷಿಕ ಪದಗಳ ಅಭಾವವೇ ಪಠ್ಯಪುಸ್ತಕ ರಚನೆಗೆ

ಮತು ಪ್ರಾದೇಶಿಕ ಭಾಷೆಗಳಲ್ಲಿ ವಿದ್ಯೆಯನ್ನು ಬೋಧಿಸುವುದಕ್ಕೆ ಇರುವ ದೊಡ್ಡ ಅಡ್ಡಿ ಎಂಬ ಪೇಲವವಾದ ಹೇಳಿಕೆಗಳನ್ನು ಮುಂದೆ ಗಮನಕ್ಕೆ ತೆಗೆದುಕೊಳ್ಳಬೇಕಾದದ್ದೇ ಇಲ್ಲ. ಆದಷ್ಟು ಮಟ್ಟಿಗೆ ಅಂತರರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಹಾಗೆಯೇ ಉಳಿಸಿಕೊಳ್ಳುವುದು ಸಾಧ್ಯ ಎಂಬುದನ್ನೂ, ಅವಕ್ಕೆ ತದ್ಭವ–ತತ್ಸಮಗಳನ್ನು ಸ್ವಲ್ಪ ಶ್ರಮದಿಂದ ಸೃಷ್ಟಿಸುವುದೂ ಸಾಧ್ಯ ಎಂಬುದನ್ನೂ ನಮ್ಮ ವಿಜ್ಞಾನ ಲೇಖಕರು ತೋರಿಸಿ ಕೊಟ್ಟಿದ್ದಾರೆ. ಪ್ರಬುದ್ಧ ಕರ್ನಾಟಕವು ತನ್ನ ಚಿನ್ನದ ಹಬ್ಬದ ಸಂದರ್ಭದಲ್ಲಿ ಪ್ರಕಟಿಸಿರುವ ೧೬೦೦ ಪುಟಗಳ ವಿಜ್ಞಾನ ವಿಶೇಷಾಂಕ ಇಂತಹ ಎಲ್ಲ ಸಮಸ್ಯೆಗಳಿಗೂ ಸಶಕ್ತವೂ ಸಚಿತ್ರವೂ ಆದ ಪರಿಹಾರ ರೂಪವಾಗಿ ನಿಂತಿದೆ.

ತನ್ನ ಅನೇಕ ಮಾಲಿಕೆಗಳ ಮೂಲಕ ಪ್ರಸಾರಾಂಗ ವಿಶ್ವವಿದ್ಯಾನಿಲಯದ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಅನೇಕ ಸಹಾಯಕ ಗ್ರಂಥಗಳನ್ನು ಒದಗಿಸುವುದರ ಜೊತೆಗೆ ಜನಸಾಮಾನ್ಯರ ಜ್ಞಾನ ತೃಷೆಯನ್ನು ಪೂರೈಸುವುದಕ್ಕಾಗಿ ಕೂಡ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಿದೆ.

ಈಗ ಹೊರಬರುತ್ತಿರುವ ಡಾ. ಎಚ್. ಡಿ. ಚಂದ್ರಪ್ಪಗೌಡ ಅವರ ''ವೈದ್ಯ ವಿಜ್ಞಾನ ಸಾಧಕರು'' ಓದುಗರಿಗೆ ತುಂಬ ಉಪಯುಕ್ತವೂ ಪ್ರಿಯವೂ ಆಗುತ್ತದೆಂದು ಆಶಿಸುತ್ತೇನೆ.

ಕೆ. ವಿ. ಪುಟ್ಟಪ್ಪ
ಪ್ರಧಾನ ಸಂಪಾದಕ

# ಮೊದಲ ಮಾತು

ವೈದ್ಯಕೀಯ ವೃತ್ತಿ ಅತಿ ಪ್ರಾಚೀನವಾದುದಾದರೂ ಮಾರಕ ರೋಗ ರುಜಿನ ಗಳಿಂದ ನರಳಿ ಸಾಯುತ್ತಿದ್ದ ಮಾನವ ಜನಾಂಗಕ್ಕೆ, ಈಗ್ಗೆ ನೂರೈವತ್ತು ವರ್ಷಗಳವರೆಗೂ ಅದರಿಂದ ಹೆಚ್ಚಿನ ಪ್ರಯೋಜನ ಲಭಿಸಿರಲಿಲ್ಲ. ಜನರಲ್ಲಿ ಅನಾದಿಯಿಂದಲೂ ಬೇರೂರಿದ್ದ ಮೂಢನಂಬಿಕೆ ಮತ್ತು ಅಜ್ಞಾನ ಹಾಗೂ ವೈದ್ಯರೆನಿಸಿಕೊಂಡವರ ಅಂಧಶ್ರದ್ಧೆ, ಹಠಮಾರಿತನ ಮತ್ತು ವೈಜ್ಞಾನಿಕ ಮನೋಭಾವಗಳ ಅಭಾವ ಆ ಪರಿಸ್ಥಿತಿಗೆ ಬಹುಮಟ್ಟಿಗೆ ಕಾರಣವಾಗಿದ್ದವು. ಭಗವಂತನ ಮುನಿಸು, ದೆವ್ವ ಭೂತಗಳ ಕಾಟ ಇತ್ಯಾದಿಗಳೇ ಕಾಯಿಲೆ ಕಸಾಲೆಗಳಿಗೆ ಕಾರಣವೆಂದು ಜನ ದೃಢವಾಗಿ ನಂಬಿದ್ದರೆ, ಪಟ್ಟಭದ್ರ ಹಿತಾಸಕ್ತಿಗಳ ದಾಸರಾಗಿದ್ದ ವೈದ್ಯರು ಅವುಗಳ ನಿವಾರಣೆಗೆ ಹೊಸ ಸಲಹೆಗಳು ಬಂದರೆ ತಮ್ಮೆಲ್ಲಾ ಪ್ರಭಾವದಿಂದ ವಿರೋಧಿಸುತ್ತಿದ್ದರು.

ಆಧುನಿಕ ವೈಜ್ಞಾನಿಕ ತಿರುವು, ಮೈಲಿಬೇನೆಯ ನಿರೋಧಕ್ಕೆ ಎಡ್ವರ್ಡ್ ಜೆನ್ನರ್ ದೇವಿ ಹಾಕುವ ಪದ್ಧತಿಯನ್ನು ಜಾರಿಗೆ ತಂದ (೧೭೯೮) ನಂತರ ಆರಂಭವಾಯಿತೆನ್ನಬಹುದು. ದೇವಿ ಹಾಕುವುದರಿಂದ ಮೈಲಿಬೇನೆಯನ್ನು ತಡೆಗಟ್ಟಬಹುದೆಂಬ ಅರಿವಾದ ಮೇಲೆ ವೈದ್ಯಕೀಯ ಕ್ಷೇತ್ರದಲ್ಲಿ ಸಂಶೋಧನಾ ಪ್ರವೃತ್ತಿ ಬೆಳೆಯತೊಡಗಿತು. ಆದರೂ ಪರಿಣಾಮಕಾರಿಯಾದ ಫಲಿತಾಂಶಗಳು ಹೊರಬರಲು ಮತ್ತು ಅರ್ಧ ಶತಮಾನ ಕಳೆಯಿತು.

ಅತ್ಯಂತ ಕಾರುಣ್ಯಮಯ ಸಂಶೋಧನೆ ''ಅನೆಸ್ಥೀಸಿಯ'' ಉದಯಿಸುವ ಚಿಹ್ನೆಗಳು ೧೮೪೦ರ ಸುಮಾರಿಗೆ ಕಾಣಿಸಿಕೊಂಡರೂ, ಅದು ಹಲವಾರು ಎಡರುತೊಡರುಗಳನ್ನು ನಿವಾರಿಸಿಕೊಂಡು, ವ್ಯಾಪಕ ಬಳಕೆಗೆ ಬರಲು ಇನ್ನೆರಡು ದಶಕಗಳು ಬೇಕಾಯಿತು. ಆ ಸಮಯದಲ್ಲೇ ಸ್ತ್ರೀಯರಿಗೆ ಮಾರಕವಾಗಿದ್ದ ''ಬಾಣಂತಿ ಜ್ವರ'' ದ ಗುಟ್ಟನ್ನರಿಯುವುದರಲ್ಲಿ ಅತ್ಯಂತ

ಶ್ರಮ ವಹಿಸಿ ಹುಗೇರಿಯಾದ ಸೆಮೆಲ್ವೀಸ್ ಯಶಸ್ವಿಯಾದರೂ, ಮನ್ನಣೆ ದೊರೆಯದೇ ಹುತಾತ್ಮನಾದ. ಇನ್ನೆರಡು ದಶಕಗಳಲ್ಲಿ ಆಧುನಿಕ ಶಸ್ತ್ರ ಚಿಕಿತ್ಸಾ ಪದ್ಧತಿಯ ಯಶಸ್ಸಿಗೆ ಕಾರಣವಾದ "ಆಂಟಿಸೆಪ್ಟಿಕ್" ನಿಯಮ ಗಳನ್ನು ರೂಪಿಸುವುದರಲ್ಲಿ ಇಂಗ್ಲೆಂಡಿನ ಜೋಸೆಫ್ ಲಿಸ್ಟರ್ ಜಯಗಳಿಸಿ ಕೀರ್ತಿಶಾಲಿಯಾದ. ಹಲವಾರು ಸಾಂಕ್ರಾಮಿಕ ಜಾಡ್ಯಗಳಿಗೆ ದೃಷ್ಟಿಗೆ ಗೋಚರವಾಗಿರದ ಸೂಕ್ಷ್ಮಾಣುಗಳೇ ಕಾರಣವೆಂಬುದನ್ನು ಶಂಕಿಸಿ, ಫ್ರಾನ್ಸಿನ ಲೂಯಿ ಪ್ಯಾಶ್ಚರ್ ರೋಗನಿರೋಧಕ ಚಿಕಿತ್ಸಾ ಪದ್ಧತಿಯನ್ನು ಜಾರಿಗೆ ತಂದು ಕೃತಾರ್ಥನಾದ. ಆ ಸಮಯದಲ್ಲೇ ಜರ್ಮನಿಯ ರಾಬರ್ಟ್‌ಕಾಕ್ ಅಗೋಚರ ಸೂಕ್ಷ್ಮಾಣುಗಳನ್ನು ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಬಯಲಿಗೆಳೆದು ಪ್ರದರ್ಶಿಸಿದ. ಈ ಶತಮಾನದ ಆದಿಯಲ್ಲಿ ರೋಗಕಾರಕ ಸೂಕ್ಷ್ಮಾಣುಗಳಿಗೆ ಮಾರಕವಾಗಬಲ್ಲ ಸಲ್ಫೋನಮೈಡ್‌ನಂತಹ ರಸಾಯನಿಕ ಔಷಧಿಗಳು, ಪೆನಿಸಿಲಿನ್‌ನಂತಹ ಆಂಟಿಬಯೋಟಿಕ್ ಮದ್ದುಗಳ ಸಂಶೋಧನೆ ನಡೆದವು.

ಈ ಎಲ್ಲಾ ಸಂಶೋಧನೆಗಳು ಅತ್ಯಂತ ಕುತೂಹಲಕರ ಮತ್ತು ಆಶ್ಚರ್ಯಕರ ಸನ್ನಿವೇಶದಲ್ಲಿ ಜರುಗಿದವು. ಅವುಗಳಲ್ಲಿ ಭಾಗಿಯಾದ ಸಾಧಕರು ಅತ್ಯಂತ ಭೀಕರ ವಿರೋಧಗಳನ್ನೆದುರಿಸಬೇಕಾಯಿತು; ಕಷ್ಟನಷ್ಟ ಗಳನ್ನನುಭವಿಸಿ ಕೆಲವರು ಮನಸ್ಥೈರ್ಯವನ್ನು ಕಳೆದುಕೊಂಡು, ಸಾವಿಗೀ ಡಾಗಬೇಕಾಯಿತು. ಇಂತಹ ವೈಜ್ಞಾನಿಕ ಪ್ರಗತಿಗೆ ತಡೆ ಒಡ್ಡಿದವರು ಆ ಕಾಲದ ಸಮಾಜ ಸುಧಾರಕರು, ಬುದ್ಧಿಜೀವಿಗಳು ಮತ್ತು ಪಂಡಿತರೆನಿಸಿ ಕೊಂಡವರೇ ಹೊರತು ಜನಸಾಮಾನ್ಯರಲ್ಲವೆನ್ನುವುದು ಇಲ್ಲಿ ಉಲ್ಲೇಖಾರ್ಹ.

ಕನ್ನಡ ಮತ್ತು ಇತರ ರಾಜ್ಯ ಭಾಷೆಗಳಲ್ಲಿ ವೈಜ್ಞಾನಿಕ ಮತ್ತು ವೈದ್ಯಕೀಯ ಸಾಹಿತ್ಯ ರಚನೆ ಹೆಚ್ಚಾಗಿ ಆಗಬೇಕೆಂಬ ಒತ್ತಾಸೆ ಇತ್ತೀಚಿನ ವರ್ಷಗಳಲ್ಲಿ ಕೇಳಿಬರುತ್ತಿದೆ. ಕಾಯಿಲೆಗಳ ಮಾಹಿತಿಯ ಲೇಖನಗಳು ಈ ಭಾಷೆಗಳಲ್ಲಿ ಈಗ ವಿಪುಲವಾಗಿ ಹೊರಬರುತ್ತಿವೆ. ತಾಂತ್ರಿಕ ಕಾಲೇಜುಗಳ ಲ್ಲಿಯೂ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕೆಂಬ ಮಹದಾಶೆ ಯಿಂದ ವಿವಿಧ ಶಾಸ್ತ್ರಗಳ ಅನುವಾದ ಮತ್ತು ರಚನೆಯೂ ಜರುಗುತ್ತಿವೆ. ಅವೆಲ್ಲಕ್ಕಿಂತ ಮಿಗಿಲಾಗಿ ಸಾಮಾನ್ಯ ಜನರಲ್ಲಿ ಇನ್ನೂ ಬೇರೂರಿರುವ

ಅಜ್ಞಾನ, ಅಂಧ ಶ್ರದ್ಧೆ, ಮೂಢನಂಬಿಕೆಗಳನ್ನು ಹೋಗಲಾಡಿಸಿ, ಅವರ ಮನಸ್ಸನ್ನು ಕೆರಳಿಸಿ, ತರ್ಕಬದ್ಧವಾದ ವೈಜ್ಞಾನಿಕ ವಿಚಾರಪರತೆಯನ್ನು ಮೂಡಿಸುವ ವೈಜ್ಞಾನಿಕ ಸಾಹಿತ್ಯ ರಚನೆಯ ಆವಶ್ಯಕತೆ ಈಗ ಹೆಚ್ಚಾಗಿದೆ ಯೆಂದರೆ ಅತಿಶಯೋಕ್ತಿಯಲ್ಲ. ಈ ಕಿರು ಹೊತ್ತಿಗೆಯಲ್ಲಿ ಮೂಡಿಬಂದಿ ರುವ ವೈದ್ಯಕೀಯ ಸಂಶೋಧನೆಗಳ ಇತಿಹಾಸ ಮತ್ತು ಅವುಗಳಲ್ಲಿ ಭಾಗಿ ಯಾದವರ ಜೀವನ ಚರಿತ್ರೆ ಆ ದಿಸೆಯಲ್ಲಿ ಒಂದು ಪುಟ್ಟ ಹೆಜ್ಜೆ ಮಾತ್ರ. ಸಹೃದಯಿಗಳಾದ ಓದುಗರು ಇವುಗಳಿಂದ ಕಿಂಚಿತ್ ವಿಚಾರಪರರಾಗು ವಂತಾದರೆ ಈ ಪ್ರಯತ್ನ ಸಾರ್ಥಕವೆಂದು ಭಾವಿಸುತ್ತೇನೆ.

ಮೈಸೂರು ವಿಶ್ವವಿದ್ಯಾನಿಲಯವು ಈ ಕೃತಿಯನ್ನು ಪ್ರಕಟಿಸುತ್ತಿರು ವುದಕ್ಕಾಗಿ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಕೆ. ಟಿ. ವೀರಪ್ಪ ಅವರಿಗೂ ಮತ್ತು ಸಹಕಾರ ನೀಡಿದ ಇತರ ಮಹನೀಯರಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ.

ಎಚ್. ಡಿ. ಚಂದ್ರಪ್ಪಗೌಡ

# ಪರಿವಿಡಿ

# ೧. ಅನೆಸ್ಥೀಸಿಯ

ಬಾಧೆ, ವೇದನೆ, ಬೇನೆ, ಯಾತನೆ ಮೊದಲಾದ ಪದಗಳ ಪ್ರಯೋಗ ವಿಭಿನ್ನ ಸನ್ನಿವೇಶಗಳಲ್ಲಾಗುತ್ತವಾದರೂ ಅವುಗಳ ಭಾವಾರ್ಥ ಒಂದೇ, —ನೋವು.

ನೋವು ಹಲವಾರು ಕಾಯಿಲೆಗಳಲ್ಲಿ ಕಾಣಿಸಿಕೊಳ್ಳುವ ಅಹಿತಕರ ಇಂದ್ರಿಯ ಜ್ಞಾನ. ಕೆಲಸಾರಿ ಮುಂಬರುವ ಅಪಾಯದ ಮುನ್ಸೂಚನೆ. ಅದರಿಂದ ಇತರ ಇಂದ್ರಿಯ ಜ್ಞಾನಗಳಿಗಿಂತ ನೋವಿನ ಬಗೆಗೆ ಹೆಚ್ಚಿನ ಆತಂಕ ಸ್ವಾಭಾವಿಕ.

ನೋವಿನ ನಿವಾರಣೆಗೆ ಅನಾದಿಯಿಂದಲೂ ಸತತ ಪ್ರಯತ್ನ ನಡೆದಿವೆ. ಹಲವಾರು ಮದ್ದು ಮತ್ತು ಚಿಕಿತ್ಸಾ ವಿಧಾನಗಳ ಪ್ರಯೋಗ ಆಗುತ್ತಲಿದೆ. ಆದರೂ ಈಗ ನೂರೈವತ್ತು ವರ್ಷಗಳವರೆಗೂ ಈ ದಿಸೆಯಲ್ಲಿ ಗಮನಾರ್ಹ ಪ್ರಗತಿ ಆಗಿರಲಿಲ್ಲ. ನೋವೇ ಪ್ರಧಾನವಾಗಿರುವ ಶಸ್ತ್ರಚಿಕಿತ್ಸಾ ವಿಧಾನ ಗಳಲ್ಲಿ ಈ ದೆಸೆಯಿಂದ ಬಹಳ ಕಾಲದಿಂದಲೂ ಹೆಚ್ಚಿನ ಪ್ರಗತಿಯಾಗಲಿಲ್ಲ. ಕಳೆದ ಶತಮಾನದಲ್ಲಿ ನಡೆದ ಕೆಲವು ಸಂಶೋಧನೆಗಳ ಪರಿಣಾಮದಿಂದ ಈ ದಿಸೆಯಲ್ಲಿ ಜಯ ದೊರೆತು, ಶಸ್ತ್ರಚಿಕಿತ್ಸಾ ಪದ್ಧತಿ ಉಚ್ಛ್ರಾಯ ಸ್ಥಿತಿಗೆ ಬರುವಂತಾಯಿತು, ವೈದ್ಯಕೀಯ ಕ್ಷೇತ್ರ ಚೇತರಿಸಿಕೊಂಡಿತು.

**ಹಿನ್ನೆಲೆ :**

ವೈದ್ಯ ವಿಜ್ಞಾನಿಗಳು ನೋವಿನ ವಿರುದ್ಧ ಜಯಗಳಿಸುವ ಮೊದಲು ಶಸ್ತ್ರಚಿಕಿತ್ಸೆಗಳು ನಡೆಯುತ್ತಿದ್ದ ಪರಿಸ್ಥಿತಿ ಹೇಗಿರಬಹುದು ? ರೋಗ ಎಷ್ಟೇ ಉಲ್ಬಣಾವಸ್ಥೆಯಲ್ಲಿದ್ದರೂ, ನೋವಿನ ಹೆದರಿಕೆಯಿಂದ ಚಿಕಿತ್ಸೆಗೆ ಒಪ್ಪುತ್ತಿದ್ದವರು ಅತಿ ವಿರಳ. ಚಿಕಿತ್ಸಾ ಸಮಯದ ಒದ್ದಾಟ, ಕೂಗು, ಚೀತ್ಕಾರಗಳಿಗೆ ಬೇಸತ್ತ ವೈದ್ಯರೂ ಸಹ ಪ್ರಾಣಾಂತಿಕ ಸ್ಥಿತಿಯಲ್ಲಿದ್ದವರಿಗೆ

ಮಾತ್ರ ಶಸ್ತ್ರಚಿಕಿತ್ಸಾ ನಿರ್ಧಾರ ಮಾಡುತ್ತಿದ್ದರು. ಪೂರ್ತಿ ಎಚ್ಚರದಿಂದಿರುವ ರೋಗಿಗಳನ್ನು ಆಸ್ಪತ್ರೆಯ ಮಲ್ಲಜಟ್ಟಿಗಳು ಯಜ್ಞಪಶುವಿನಂತೆ ತಳ್ಳಿಕೊಂಡು ತರುವ ದೃಶ್ಯವೇ ಕರುಣಾಜನಕ.

ಅಪರೂಪಕ್ಕೆ ನಡೆಯುತ್ತಿದ್ದ ಈ ಚಿಕಿತ್ಸೆಗಳನ್ನು ವೀಕ್ಷಿಸಲು ವೈದ್ಯರು, (ವೈದ್ಯ) ವಿದ್ಯಾರ್ಥಿಗಳು ಕೊಠಡಿಯಲ್ಲಿ ಕಿಕ್ಕಿರಿದು ಸೇರಿರುತ್ತಿದ್ದರು. ಸಲಕರಣೆಗಳನ್ನು ಜೋಡಿಸಿಕೊಂಡು, ಇನ್ನಷ್ಟು ಮಲ್ಲಜಟ್ಟಿಗಳೊಡನೆ ಶಸ್ತ್ರವೈದ್ಯ, ರೋಗಿಗಾಗಿ ಕಾಯುವ ದೃಶ್ಯ ಭಯಾನಕ.

ರೋಗಿಯನ್ನು ಮೇಜಿನ ಮೇಲೆ ಬಲವಂತದಿಂದ ಹಿಡಿದು ಕಟ್ಟಿ ಮಲಗಿಸಿ, ಒತ್ತಿ ಹಿಡಿದುಕೊಳ್ಳುತ್ತಿದ್ದರು. ಆದಷ್ಟು ಕಡಿಮೆ ನೋವನ್ನುಂಟುಮಾಡಲು ಅತ್ಯಂತ ತ್ವರಿತಗತಿಯಿಂದ ಚಿಕಿತ್ಸೆ ನಡೆಯುವುದು ಅನಿವಾರ್ಯ. ವೀಕ್ಷಕರು ಕಣ್ಣು ಮುಚ್ಚಿ ಬಿಡುವುದರಲ್ಲೇ ಕೆಲವು ಶಸ್ತ್ರಚಿಕಿತ್ಸೆಗಳು ಮುಗಿದಿರುತ್ತಿದ್ದುವಂತೆ. ಶಸ್ತ್ರವೈದ್ಯನ ಪ್ರಾವೀಣ್ಯತೆ ಆವನ ವೇಗವನ್ನವಲಂಬಿಸಿತ್ತು ! ರೋಗಿಯ ಚೀರಾಟದಿಂದ ಕೊಠಡಿಯಲ್ಲಿ ಗೊಂದಲಮಯ ವಾತಾವರಣ.

ಅತಿಯಾದ ನೋವಿನಿಂದುಂಟಾದ ಮಾನಸಿಕ ತಲ್ಲಣದಿಂದ ಹಲವಾರು ರೋಗಿಗಳು ಸಾಯುತ್ತಿದ್ದರು. ಗಾಯಗಳಲ್ಲಿ ನಂಜಾಗುವುದನ್ನು ತಡೆಯಲು ಆಗಿನ್ನೂ ಸಾಧ್ಯವಾಗಿರಲಿಲ್ಲವಾದ್ದರಿಂದ, ಉಳಿದ ಕೆಲವರೂ ಸಾಯುತ್ತಿದ್ದರು. ಇದರಿಂದ ಆ ಕಾಲದ ಶಸ್ತ್ರಚಿಕಿತ್ಸೆಗಳು ತೀರಾ ಸಾಮಾನ್ಯ ರೀತಿಯವು—ಮೈಮೇಲಿನ ಗಡ್ಡೆಗಳನ್ನು ತೆಗೆಯುವುದು, ಹುಣ್ಣುಗಳನ್ನು ಸುಡುವುದು, ಕೊಳೆತ ಕೈ ಕಾಲುಗಳ ಅಂಗ ವಿಚ್ಛೇದನ ಇತ್ಯಾದಿ.

**ದಾಖಲೆಗಳು :**

ಈ ವಿವರಣೆಯಿಂದ ಹಿಂದೆ ನೋವನ್ನು ಹೋಗಲಾಡಿಸಲು ಪ್ರಯತ್ನಗಳು ನಡೆಯುತ್ತಿರಲಿಲ್ಲವೇ ಎಂಬ ಅನುಮಾನ ಸ್ವಾಭಾವಿಕ. ಇಲ್ಲ, ಆ ದಿಸೆಯಲ್ಲಿ ಅನಾದಿಕಾಲದಿಂದಲೂ ಚಿಂತನೆ ಮತ್ತು ಪ್ರಯತ್ನಗಳ ದಾಖಲೆ ಹೇರಳವಾಗಿವೆ.

ಪರ್ಷಿಯಾ ದೇಶದ ಸುಪ್ರಸಿದ್ಧ ಕವಿ ಹಾಗೂ ಇತಿಹಾಸಕಾರ ಫಿರ್ದೂಷಿ (ಕ್ರಿ. ಪೂ. ೫೦೦೦), ಐತಿಹಾಸಿಕ ವೀರಾಗ್ರಣಿ ರುಸ್ತುಂನ ಜನನ

ಕಾಲದಲ್ಲಿ, ಅವನ ತಾಯಿಗೆ ಪ್ರಜ್ಞೆ ತಪ್ಪಿಸಿದ ನಿದರ್ಶನ ಉಲ್ಲೇಖಿಸಿದ್ದಾನೆ. ಹೆರಿಗೆಯ ನೋವನ್ನು ತಾಳಲಾರದ ರುಸ್ತುಂನ ತಾಯಿಗೆ ದೇವದೂತನ ಆದೇಶದಂತೆ ಔಷಧ ಮಿಶ್ರಿತ ಮದ್ಯವನ್ನು ಕುಡಿಸಿ, ಪ್ರಜ್ಞೆ ತಪ್ಪಿದಮೇಲೆ ಆಕೆಯ ಹೊಟ್ಟೆಯನ್ನು ಕತ್ತರಿಸಿ, ಮಗುವನ್ನು ಹೊರತೆಗೆಯಲಾಯಿತಂತೆ. ಈಜಿಪ್ಟ್‌ನ ಕ್ರಿ. ಪೂ. ೧೬೦೨ ರ ದಾಖಲೆಯೊಂದರ ಪ್ರಕಾರ ನೆಪಂಥೆ (*Nepenthe*) ಎಂಬ ಮದ್ದನ್ನು ನೋವು ಹೋಗಲಾಡಿಸಲು ಉಪಯೋಗಿಸುತ್ತಿದ್ದರು.

ಭಾರತದ ಹೆಸರಾಂತ ಶಸ್ತ್ರವೈದ್ಯ ಸುಶ್ರುತ (ಕ್ರಿ. ಪೂ. ೧೦೦೦–ಕ್ರಿ. ಶ. ೪೦೦) ಒಂದು ವಿಧದ "ಅರಿವಳಿಕೆ" (*Anaesthesia*) ಸಾಧನವನ್ನು ಬಳಸುತ್ತಿದ್ದ ದಾಖಲೆ ಇದೆ. ಸಹಿಸಲಾರದ ತಲೆ ಶೂಲೆಯಿಂದ ನರಳುತ್ತಿದ್ದ ರಾಜನೊಬ್ಬನಿಗೆ "ಸಮ್ಮೋಹಿನಿ" ಎಂಬ ಮದ್ದನ್ನು ಕುಡಿಸಿ ಪ್ರಜ್ಞಾಹೀನನನ್ನಾಗಿ ಮಾಡಿ, ತಲೆಯನ್ನು ಕೊರೆದು ಮಿದುಳಿನ ಸ್ವಲ್ಪ ಭಾಗವನ್ನು ತೆಗೆದನಂತೆ. ಮತ್ತೆ "ಸಂಜೀವನಿ" ಎಂಬ ಮದ್ದನ್ನು ಕುಡಿಸಿ ಅವನನ್ನು ಎಚ್ಚರಗೊಳಿಸಿದನಂತೆ. ಆದರೆ ಅವೆರಡೂ ಮದ್ದುಗಳ ಗುಟ್ಟೇನೆಂಬುದು ಸುಶ್ರುತಸಂಹಿತೆಯಲ್ಲಿಲ್ಲ!

ಜೀವಕ (ಕ್ರಿ.ಪೂ. ೬೦೦), ಬುದ್ಧನ ಕಾಲದ ಹೆಸರಾಂತ ವೈದ್ಯ. ತಲೆ ಮತ್ತು ಉದರ ರೋಗಗಳಿಗೆ ಶಸ್ತ್ರಚಿಕಿತ್ಸೆ ಮಾಡುತ್ತಿದ್ದನೆಂಬ ಪ್ರತೀತಿ. ಚಿಕಿತ್ಸೆಗೆ ಮೊದಲು ರೋಗಿಯೊಡನೆ ದೀರ್ಘ ಸಂಭಾಷಣೆ ಮತ್ತು ಅವನ ಮನವೊಲಿಕೆ ಜೀವಕನ ಅರಿವಳಿಕಾ ಸಾಧನ. ಬಹುಶಃ ಮುಂದೆ ಹದಿನೇಳನೇ ಶತಮಾನದಲ್ಲಿ ಮೆಸ್‌ಮರ್ ಎಂಬಾತನ ವಶೀಕರಣ ವಿದ್ಯೆ (*Mesmerism*) ಗೆ ಇದೇ ಮೂಲವಾಗಿರಬಹುದು.

ಬೈಬಲ್‌ನ ಪ್ರಥಮ ಗ್ರಂಥ "ಜೆನಿಸಿಸ್" ಭಗವಂತನಿಂದ ಈವ್ (*Eve*) ಸೃಷ್ಟಿಯಾದ ಕಥೆಯಿದೆ. ಆಡಂ (*Adam*) ಗೆ ದೀರ್ಘನಿದ್ದೆ ಬರುವಂತೆ ಮಾಡಿ, ಅವನ ಪಕ್ಕೆಲಬನ್ನು ತೆಗೆದು ದೇವರು ಅವಳನ್ನು ಸೃಷ್ಟಿಸಿದನಂತೆ.

ಅಫೀಮು, ಭಂಗಿ, ಮಾಂಡ್ರೇಕ್, ಹೆನ್‌ಬೇನ್, ಹೆಮ್‌ಲಾಕ್ ಮುಂತಾದ ಗಿಡಮೂಲಿಕಾ ಔಷಧಿಗಳು, ನೋವಿನ ಬಾಧೆಯನ್ನು ಕಡಿಮೆ

ಮಾಡಲು ಪುರಾಣದ ಕಾಲದಿಂದಲೂ ವಿವಿಧ ದೇಶಗಳಲ್ಲಿ ಉಪಯೋಗಿಸು ತ್ತಿದ್ದುದರ ಬಗ್ಗೆ ಹೇರಳ ದಾಖಲೆಗಳಿವೆ. ಇವೆಲ್ಲಾ ನಿದ್ರಾಜನಕ ಮದ್ದು ಗಳಾಗಿದ್ದವೇ ಹೊರತು ಅರಿವಳಿಕೆಯ ಸಾಧನಗಳಾಗಿರಲಿಲ್ಲ.

ಪೂರ್ತಿ ಪ್ರಜ್ಞೆ ತಪ್ಪದೇ ಸ್ಥಳೀಯವಾಗಿ ಅರಿವಳಿಕೆಯನ್ನು ಬರಿಸು ವುದರಲ್ಲಿ ಬಹಳ ಕಾಲದಿಂದ ಚೀನಾ ದೇಶದಲ್ಲಿ ಪ್ರಚಾರವಿರುವ "ಅಕ್ಯು ಪಂಕ್ಚರ್"(*Accupuncture*)ಪದ್ಧತಿ ಇಲ್ಲಿ ಉಲ್ಲೇಖಾರ್ಹ. ಈ ಪದ್ಧತಿಯ ಪುನರುತ್ಥಾನ ಈಗ ಆಗುತ್ತಲಿದ್ದು ಪ್ರಪಂಚದ ಹಲವಾರು ಕಡೆ ವೈದ್ಯರ ಗಮನ ಸೆಳೆಯುತ್ತಲಿದೆ.

ಅರಿವಳಿಕೆಯ ಶೋಧನೆಯ ಬಗೆಗೆ ಇಷ್ಟೆಲ್ಲಾ ದಾಖಲೆಗಳಿರುವು ದಾದರೂ ಹದಿನೆಂಟು ಮತ್ತು ಹತ್ತೊಂಭತ್ತನೆಯ ಶತಮಾನದವರೆಗೂ ಈ ದಿಸೆಯಲ್ಲಿ ತೃಪ್ತಿಕರವಾದ ಸಾಧನಗಳಾವುವೂ ಬೆಳಕಿಗೆ ಬರಲಿಲ್ಲ. ಈ ಅವಧಿ ಯಲ್ಲಿ ಹಲವಾರು ರಸಾಯನಿಕ ಪದಾರ್ಥಗಳ ಬಳಕೆ ಪ್ರಾಯೋಗಿಕವಾಗಿ ನಡೆದವು. ಕೆಲವು ಆಕಸ್ಮಿಕ ಘಟನೆಗಳೂ ಅವುಗಳಿಗಿರುವ ಅರಿವಳಿಕಾ ಗುಣ ಲಕ್ಷಣಗಳನ್ನು ಬೆಳಕಿಗೆ ತಂದವು.

ಹೀಗೆ ಬೆಳಕಿಗೆ ಬಂದ ರಸಾಯನಿಕ ಸಾಮಗ್ರಿಗಳ ಸಾಮರ್ಥ್ಯವನ್ನು ಸ್ವಂತ ಲಾಭಕ್ಕಾಗಿ ಉಪಯೋಗಿಸಿದವರನೇಕ. ಸಂಶೋಧನೆಯ ಆದ್ಯತೆಯ ಬಗೆಗೆ ಕೆಲವರು ಹೋರಾಡಿದರು. ಇನ್ನು ಕೆಲವು ಕಡೆ ಮೂಢನಂಬಿಕೆ. ಅಂಧ ಶ್ರದ್ಧೆ, ಧಾರ್ಮಿಕ ತತ್ವ ಅನುಚರಣೆಯ ನೆಪದಲ್ಲಿ ಈ ಸಾಧನಗಳ ವ್ಯಾಪಕ ಬಳಕೆಗೆ ಪ್ರಬಲ ವಿರೋಧ ವ್ಯಕ್ತಪಡಿಸಿದರು. ಆದರೆ ಈ ಸಾಮಗ್ರಿಗಳ ಉನ್ನತ ಗುಣ ಲಕ್ಷಣ ಹಾಗೂ ತ್ಯಾಗಮನೋಭಾವದ ಕೆಲವರ ಅವಿಶ್ರಾಂತ ದುಡಿಮೆ ಮತ್ತು ಹೋರಾಟದ ಫಲವಾಗಿ ಅನೆಸ್ಥೀ ಸಿಯಾ ಪದ್ಧತಿ ಅಥವಾ ಅರಿವಳಿಕಾ ವಿಧಾನ ಪ್ರಸ್ತುತ ಸಮಯದಲ್ಲಿ ಅತ್ಯು ನ್ನತ ಮಟ್ಟವನ್ನೇರಿದ್ದು ಮಾನವ ಕೋಟಿಯ ನೋವು ನರಳಾಟಗಳನ್ನು ಹೋಗಲಾಡಿಸುವುದರಲ್ಲಿ ಪೂರ್ಣ ಯಶಸ್ವಿಯಾಗಿದೆ. ಆ ದಿಸೆಯಲ್ಲಿ ನಡೆದ ರೋಮಾಂಚಕಾರಿ ಘಟನೆಗಳ ಮತ್ತು ಅವುಗಳಲ್ಲಿ ಪಾಲ್ಗೊಂಡವರ ಸೂಕ್ಷ್ಮ ಪರಿಚಯ ಮಾಡಿಸುವುದು ಈ ಕೃತಿಯ ಉದ್ದೇಶ.

**" ನಗಿಸುವ ಅನಿಲ ":**

ನೈಟ್ರಸ್ ಆಕ್ಸೈಡ್ ಅನಿಲ, ಹದಿನೆಂಟನೇ ಶತಮಾನದ ಸಂಶೋಧನೆಗಳಿಂದ ಬೆಳಕಿಗೆ ಬಂದ ರಸಾಯನಿಕ. ಸೇವಿಸಿದವರಿಗೆ ತಡೆಯಲಾರದ ನಗು ಬರುತ್ತಿದ್ದುದರಿಂದ " ನಗಿಸುವ ಅನಿಲ "(*Laughing Gas*) ಎಂಬ ಅನ್ವರ್ಥನಾಮ ಅದಕ್ಕೆ. ಅದನ್ನು ಸೇವಿಸಿದವರು ಸಂತೋಷ ಭರಿತರಾಗಿ, ಲಘು ಪ್ರವೃತ್ತಿಯಿಂದ ನಕ್ಕು ನಲಿಯುತ್ತಾರೆ, ಕುಣಿದು ಕುಪ್ಪಳಿಸುತ್ತಾರೆ.

ಮನಸ್ಸನ್ನು ಹಗುರಗೊಳಿಸಿ ಸಂತೋಷವನ್ನುಂಟುಮಾಡುವ ಈ ಅನಿಲವನ್ನು ಆಗಾಗ್ಗೆ ಸೇವಿಸುವುದು ಕೆಲವರ ಹವ್ಯಾಸವೂ ಆಯಿತು. ಮೊದಮೊದಲು ಸಾಮೂಹಿಕವಾಗಿ ಹರ್ಷದಿಂದ ನಲಿದಾಡಲು ಜನರು ಅದನ್ನು ಒಟ್ಟಾಗಿ ಸೇವಿಸುವ ಏರ್ಪಾಡುಗಳನ್ನು ಮಾಡುತ್ತಿದ್ದರು. ಅಂತಹವರನ್ನು ನೋಡಿ ಆನಂದಪಡಲು ಇತರರೂ ಅಂತಹ ಸ್ಥಳಗಳಲ್ಲಿ ಸೇರುತ್ತಿದ್ದರು. ಮುಂದೆ ಹಣ ಸಂಪಾದನೆಯ ದೃಷ್ಟಿಯಿಂದ ಹೆಸರಾಂತ ರಂಗಮಂದಿರಗಳಲ್ಲಿ ಕೆಲವರು ಅನಿಲವನ್ನು ಸೇವಿಸುವವರಿಂದಲೂ ಮತ್ತು ಅವರನ್ನು ನೋಡಲು ಬರುವವರಿಂದಲೂ ನಿಗದಿತ ಹಣ ವಸೂಲು ಮಾಡಿ ಪ್ರದರ್ಶನ ಏರ್ಪಡಿಸುವ ಪದ್ಧತಿಯೂ ಜಾರಿಗೆ ಬಂತು.

ಅಮೆರಿಕಾದ ವೆರ್ಮಾಂಟ್ ಪ್ರಾಂತದ ಹಾರ್ಟ್‌ಫೋರ್ಡ್‌ನಲ್ಲಿ ೧೮೪೪ರ ಡಿಸೆಂಬರ್ ೧೦ ರಂದು ಅಂತಹದೊಂದು ಪ್ರದರ್ಶನ. 'ಪ್ರೊಫೆಸರ್' ಕೋಲ್ಟನ್ ಅದರ ವ್ಯವಸ್ಥಾಪಕ. ಹಾರ್ಟ್‌ಫೋರ್ಡ್‌ನ ನೂರಾರು ನಾಗರಿಕರು ಅಲ್ಲಿ ನೆರೆದಿದ್ದರು.

ಹಲವಾರು ನಾಗರಿಕರು ವೇದಿಕೆಯಮೇಲೆ ಅನಿಲವನ್ನು ಸೇವಿಸಿ, ಕೇಕೆ ಹಾಕಿ, ಹಾಡಿ, ಕುಣಿದು, ವಿವಿಧ ಭಂಗಿಗಳಲ್ಲಿ ನೃತ್ಯ ಮಾಡುವುದನ್ನು ಪ್ರೇಕ್ಷಕರು ನೋಡಿ ನಗೆಗಡಲಿನಲ್ಲಿ ಮುಳುಗಿದರು. ಹಾರ್ಟ್‌ಫೋರ್ಡ್‌ ಹೆಸರಾಂತ ದಂತ ವೈದ್ಯ. ಹೊರೇಸ್‌ವೆಲ್ಸ್ ತನ್ನ ಪತ್ನಿ ಲಿಜ್‌ಳ ಜೊತೆ ಪ್ರದರ್ಶನ ವೀಕ್ಷಿಸಲು ಅಲ್ಲಿದ್ದ. ಅನಿಲ ಸೇವಿಸಿದವರಲ್ಲುಂಟಾಗುತ್ತಿದ್ದ ಆಹ್ಲಾದಕರ ಅನುಭವ ಪಡೆಯಲು, ತನ್ನ ಸ್ಥಾನಮಾನವನ್ನೂ ಲೆಕ್ಕಿಸದೆ, ಸ್ವಲ್ಪ ಕಾಲ ಅದನ್ನು ಸೇವಿಸಿ ಎಲ್ಲರಂತೆ ಕುಣಿದಾಡಿದ. ಅವರಲ್ಲೆಲ್ಲಾ

ಸ್ಯಾಮ್ಯುಯಲ್ ಕೂಲಿ ಎಂಬುವನು ಅತ್ಯಂತ ಹೆಚ್ಚು ಆನಂದಭರಿತನಾಗಿ ಕುಣಿಯುತ್ತಿದ್ದು, ಅವನ ಕಾಲು ಬೆಂಚೊಂದಕ್ಕೆ ಜೋರಾಗಿ ತಗುಲಿ, ಬೀಳು ವುದರಲ್ಲಿದ್ದ, ಆದರೂ ಏನೂ ಆಗದವನಂತೆ ಮತ್ತೂ ಜೋರಾಗಿ ಕುಣಿದು ಕುಪ್ಪಳಿಸಿದ.

ಸ್ವಲ್ಪ ಸಮಯದನಂತರ ಅನಿಲದ ಪ್ರಭಾವ ಇಳಿದು ಕೂಲಿ ಪ್ರೇಕ್ಷಕರ ಜಾಗದಲ್ಲಿ ಬಂದು ಕುಳಿತ. ಪಕ್ಕದಲ್ಲೇ ಇದ್ದ ಹೊರೇಸ್‌ವೆಲ್ಸ್ ಅವನ ಕಾಲಿಗೆ ಬೆಂಚು ತಗುಲಿದಾಗ ನೋವಾಗಲಿಲ್ಲವೇ, ಎಂದು ವಿಚಾರಿಸಿದ. ಅದರ ಅರಿವೇ ಇಲ್ಲದ ಕೂಲಿಯು ಪಾಯಿಜಾಮುವನ್ನು ಮೇಲೆತ್ತಿ ನೋಡಿದಾಗ ಕಾಲಿನಲ್ಲಿ ಆಳವಾದ ಗಾಯವಾಗಿದ್ದು, ರಕ್ತ ಸುರಿಯುತ್ತಿತ್ತು ! ನೋವಿನ ಅನುಭವ ಕೂಲಿಗೆ ಆಗ ಗೋಚರಿಸಿತಂತೆ.

ಈ ಘಟನೆ ವೆಲ್ಸ್‌ನ ಸುಪ್ತಚೇತನವನ್ನು ಚುರುಕುಗೊಳಿಸಿತು. ನೈಟ್ರಸ್ ಆಕ್ಸೈಡ್ ಸೇವಿಸಿದಾಗ ಆಹ್ಲಾದವಲ್ಲದೆ, ನೋವೂ ಆಗಲಾರ ದೆಂಬುದು ಅವನಿಗೆ ಆ ಕ್ಷಣ ಹೊಳೆಯಿತು. ಅದರ ಉಪಯೋಗದಿಂದ ನೋವಿಲ್ಲದೆ ಹಲ್ಲು ಕೀಳಬಹುದಲ್ಲವೇ ?

ಪ್ರದರ್ಶನ ಮುಗಿದನಂತರ ಕೋಲ್ಟನ್‌ನನ್ನು ಸಂಧಿಸಿ ಅನಿಲದ ಬಗೆಗೆ ಹೆಚ್ಚಿನ ಮಾಹಿತಿ ಪಡೆದ ವೆಲ್ಸ್, ಮರುದಿನ ಹಲ್ಲು ಕೀಳಿಸಿಕೊಳ್ಳುವವ ರೊಬ್ಬರಿಗೆ ಅದರ ಪ್ರಯೋಗ ಮಾಡುವಂತೆ ಅವನನ್ನು ಹುರಿದುಂಬಿಸಿದ. ತನಗೇ ನೋವುಂಟು ಮಾಡುತ್ತಿದ್ದ ಹಲ್ಲೊಂದನ್ನು ಅನಿಲದ ಸಹಾಯದಿಂದ ಕೀಳಿಸಿಕೊಳ್ಳುವ ನಿರ್ಧಾರವನ್ನೂ ಅಲ್ಲೇ ಮಾಡಿಕೊಂಡ.

ಹೊರೇಸ್‌ವೆಲ್ಸ್, ಹಾರ್ಟ್‌ಫೋರ್ಡ್‌ನ ಶ್ರೀಮಂತ ಕುಟುಂಬದವ. ಜನನ ೧೮೧೫, ಬಾಲ್ಯವಿದ್ಯಾಭ್ಯಾಸ ಹಾರ್ಟ್‌ಫೋರ್ಡ್‌ನಲ್ಲಿ. ದಂತವೈದ್ಯ ನಾಗಬೇಕೆಂಬ ಹಂಬಲ. ಮುಂದೆ ಬೋಸ್ಟನ್ ನಗರದ ನುರಿತ ದಂತವೈದ್ಯ ರಲ್ಲಿ ತರಬೇತಿ. ಆಳವಾದ ಅಭ್ಯಾಸ, ಒಳ್ಳೆಯ ಕಾರ್ಯದಕ್ಷತೆಯ ಸಂಪಾ ದನೆ. ತರಬೇತಿ ನಂತರ ಹಾರ್ಟ್‌ಫೋರ್ಡ್‌ನಲ್ಲಿ ವೃತ್ತಿ ಪ್ರಾರಂಭ, ಶ್ರದ್ಧೆ ಮತ್ತು ಕಾರ್ಯದಕ್ಷತೆಯಿಂದ ಹಣ ಸಂಪಾದನೆ ಮತ್ತು ಖ್ಯಾತಿ. ಇನ್ನೊಂದು ಶ್ರೀಮಂತ ಮನೆತನದ ಸುಂದರಿ ಲಿಜ್‌ಳೊಡನೆ ವಿವಾಹ. ವೆಲ್ಸ್‌ನ ಕೀರ್ತಿ

ಸುತ್ತಮುತ್ತ ಹರಡಿ, ವೃತ್ತಿಯಲ್ಲಿ ತರಬೇತಿ ಪಡೆಯಲು ಹಲವಾರು ಜನ ಶಿಷ್ಯರೂ ಬಂದು ಸೇರಿದ್ದರು.

'ಪ್ರೊಫೆಸರ್' ಕೋಲ್ಟನ್ ಹಿಂದಿನ ದಿನದ ಮಾತಿನಂತೆ ನಿಗದಿತ ಸಮಯಕ್ಕೆ ವೆಲ್ಸ್‌ನ ಚಿಕಿತ್ಸಾಲಯದಲ್ಲಿ ಹಾಜರಾದ. ಹಲ್ಲು ಕೀಳುವ ಸಲಕರಣೆಗಳನ್ನು ಜೋಡಿಸಿಕೊಂಡು, ವೆಲ್ಸ್ ತನ್ನ ಸಹಾಯಕ ರಿಗ್ಸ್‌ಗೆ ಅವನಿಗೆ ಅನಿಲ ಸೇವನೆಯಾದ ಕೂಡಲೇ ತೊಂದರೆ ಕೊಡುತ್ತಿದ್ದ ಹಲ್ಲನ್ನು ಕೀಳುವಂತೆ ಆಜ್ಞಾಪಿಸಿದ. ಕುರ್ಚಿಯಲ್ಲಿ ಕುಳಿತ ವೆಲ್ಸ್‌ಗೆ ಕೋಲ್ಟನ್ ನೈಟ್ರಸ್ ಆಕ್ಸೈಡ್ ಅನಿಲವಿರುವ ರಬ್ಬರ್ ಚೀಲದ ಬಿರಡೆ ತೆಗೆದು ಸೇವಿಸುವಂತೆ ಮಾಡಿದ. ವೆಲ್ಸ್ ಹಿಂದಿನ ದಿನದಂತೆ ನಲಿದು ಸ್ವಲ್ಪ ಸಮಯದಲ್ಲೇ ಜ್ಞಾನ ತಪ್ಪಿದಂತಾದ. ಮುಂದೆ ಮುಖ ಬಿಳಿಚಿ, ಇನ್ನೂ ಸ್ವಲ್ಪ ಹೊತ್ತಿನಲ್ಲಿ ನೀಲಿಯಾಯಿತು. ವೆಲ್ಸ್‌ಗೆ ಹೃದಯಸ್ತಂಭನವಾಗಬಹುದೆಂಬ ಗಾಬರಿ ರಿಗ್ಸ್‌ಗೆ. ಅವನ ಬಾಯಿ ತೆರಸಿ, ಹಲ್ಲಿಗೆ ಚಿಮ್ಮಟ ಹಾಕಿ ಅಲ್ಲಾಡಿಸಿ ಕಿತ್ತು ಬಿಸಾಕಿದ. ಕೋಲ್ಟನ್ ಅನಿಲ ಕೊಡುವುದನ್ನು ನಿಲ್ಲಿಸಿದ. ಸ್ವಲ್ಪ ಸಮಯದಲ್ಲೇ ವೆಲ್ಸ್ ಪೂರ್ತಿ ಎಚ್ಚರಗೊಂಡ. ನೆಲದ ಮೇಲೆ ಬಿದ್ದ ತನ್ನ ಹಲ್ಲನ್ನು ನೋಡಿ ಅಚ್ಚರಿಗೊಂಡ. ಅವನಿಗೆ ಸೂಜಿ ಚುಚ್ಚಿದಷ್ಟೂ ನೋವಾಗಿರಲಿಲ್ಲ!

ತಾನೇ ಅನುಭವಿಸಿದ ಈ ಅನುಭವದಿಂದ, ವೆಲ್ಸ್‌ಗೆ ಹೊಸ ಪ್ರಪಂಚದ ಚಿತ್ರ ಹೊಳೆದಂತಾಯಿತು. ನೈಟ್ರಸ್ ಆಕ್ಸೈಡ್‌ನ ಬಳಕೆ ವೈದ್ಯಕೀಯ ವಲಯದಲ್ಲುಂಟುಮಾಡಬಹುದಾದ ಕ್ರಾಂತಿಯ ಕನಸು ಅವನಲ್ಲುಂಟಾಯಿತು.

ನೈಟ್ರಸ್ ಆಕ್ಸೈಡನ್ನು ತಯಾರಿಸುವ ವಿಧಾನವನ್ನು ಕೋಲ್ಟನ್‌ನಿಂದ ತಿಳಿದುಕೊಂಡು, ಮುಂದೆ ಹಲವಾರು ಜನರಿಗೆ ಅದನ್ನು ಪ್ರಯೋಗಿಸಿ ನೋವಿಲ್ಲದಂತೆ ಹಲ್ಲುಗಳನ್ನು ಕೀಳಲಾರಂಭಿಸಿದ. ಅದೇ ಮೊದಲ ಸಾರಿ ಹಾರ್ಟ್‌ಫೋರ್ಡ್‌ನ ಜನ ನೋವಾಗದೇ ಹಲ್ಲು ಕೀಳಿಸಿಕೊಂಡ ಅನುಭವ ಪಡೆದರು. ಸುದ್ದಿ ಸುತ್ತಮುತ್ತಲ ಊರುಗಳಿಗೂ ಹರಡಿ ನೂರಾರು ಜನ ಅವನಿಂದ ಹಲ್ಲು ಕೀಳಿಸಿಕೊಂಡು ಆನಂದಭರಿತರಾದರು. ಒಳ್ಳೆ ಹೆಸರು ಮತ್ತು ಸಂಪಾದನೆ ವೆಲ್ಸ್‌ಗೂ ಹರ್ಷವನ್ನುಂಟುಮಾಡಿತು.

ಸಾಹಸಪ್ರವೃತ್ತಿಗೆ ಹೆಸರಾದ ವೆಲ್ಸ್, ನೈಟ್ರಸ್ ಆಕ್ಸೈಡ್‌ನಂತಹ ಗುಣಲಕ್ಷಣಗಳಿರಬಹುದಾದ ಇತರ ರಸಾಯನಿಕಗಳ ಪರಿಶೋಧನೆ ನಡೆಸಿದ. ಸಲ್ಫ್ಯೂರಿಕ್ ಈಥರ್ ದ್ರಾವಣಕ್ಕೆ, ನೈಟ್ರಸ್ ಆಕ್ಸೈಡ್‌ಸಂತೆ ಮೋಜುಂಟುಮಾಡುವ ಗುಣವಿರುವುದನ್ನು ಗುರುತಿಸಿದ. ಅದರ ಸೇವನೆ ಅಷ್ಟೊಂದು ಹಿತಕರವಲ್ಲವೆನ್ನಿಸಿದ್ದರಿಂದ ಪ್ರಯೋಗ ಮುಂದು ವರಿಯಲಿಲ್ಲ.

## ಬೋಸ್ಟನ್ ಪ್ರಯೋಗ :

ನೈಟ್ರಸ್ ಆಕ್ಸೈಡ್‌ನ ಬಳಕೆ ವೆಲ್ಸ್‌ನ ಸಂಪಾದನೆಯನ್ನು ಅಧಿಕ ಗೊಳಿಸುತ್ತಿದ್ದರೂ, ಅದರ ಬಳಕೆ ದಂತ ಚಿಕಿತ್ಸೆಯೇ ಅಲ್ಲದೆ ವೈದ್ಯಕೀಯ ಕ್ಷೇತ್ರ, ಅವರಲ್ಲೂ ಶಸ್ತ್ರಚಿಕಿತ್ಸೆಯಲ್ಲಿ ನಡೆಯುವಂತಾದರೆ ಇನ್ನೂ ಹೆಚ್ಚು ಜನರ ನೋವಿನ ಸಮಸ್ಯೆ ನಿವಾರಣೆಯಾಗುತ್ತದೆಂಬುದು ಅವನ ಆಕಾಂಕ್ಷೆ. ಅದರ ಗುಟ್ಟನ್ನು ಹೊರಗೆಡಹಿ ಇತರ ವೈದ್ಯರೂ ಉಪಯೋಗಿಸುವಂತಾಗ ಬೇಕೆಂಬುದು ಅವನ ಹಂಬಲ. ನಿಸ್ವಾರ್ಥ ಮನೋಭಾವ ಮತ್ತು ಮಾನವೀಯತೆ ಅವನಲ್ಲಿ ಬೇರೂರಿದ್ದ ಗುಣಗಳು.

ಬೋಸ್ಟನ್ ನಗರ ಆ ಕಾಲದ ಅಮೆರಿಕಾದ ಹೆಸರಾಂತ ವೈದ್ಯಕೀಯ ಕೇಂದ್ರ. ಮೆಸ್ಸಾಚುಸೆಟ್ಸ್ ಜನರಲ್ ಆಸ್ಪತ್ರೆ ಇಂದಿನಂತೆ ಆಗಲೂ ಪ್ರಸಿದ್ಧಿ ಪಡೆದ ವೈದ್ಯರ ಆವಾಸಸ್ಥಾನ. ಜೆ. ಸಿ. ವಾರೆನ್ ಆ ಕಾಲದ ಹೆಸರಾಂತ ಶಸ್ತ್ರವೈದ್ಯ. ವಾರೆನ್ ನೈಟ್ರಸ್ ಆಕ್ಸೈಡನ್ನು ರೋಗಿಗಳಲ್ಲಿ ಪ್ರಯೋಗಿ ಸುವಂತಾದರೆ ವೈದ್ಯಕೀಯ ಕ್ಷೇತ್ರದಲ್ಲಿ ಅದು ವ್ಯಾಪಕವಾಗಿ ಬಳಕೆಗೆ ಬರುವುದರಲ್ಲಿ ಸಂದೇಹವಿಲ್ಲವೆಂಬುದು ವೆಲ್ಸ್‌ನ ಖಚಿತಾಭಿಪ್ರಾಯ, ಹಾಗೂ ಹಂಬಲ. ಆದರೆ ವಾರೆನ್‌ನಂತಹವನನ್ನೂ ಹಳ್ಳಿಯ ದಂತವೈದ್ಯ ಭೇಟಿಯಾಗುವುದು ಅಸಾಧ್ಯ.

ವೆಲ್ಸ್‌ನ ಶಿಷ್ಯನಾಗಿದ್ದ ವಿಲಿಯಂ ಮಾರ್ಟನ್ ಬೋಸ್ಟನ್‌ನಲ್ಲಿ ದಂತ ವೈದ್ಯನಾಗಿದ್ದ. ವೆಲ್ಸ್ ೧೮೪೫ರಲ್ಲಿ ಬೋಸ್ಟನ್‌ಗೆ ತೆರಳಿ, ಅವನಿಗೆ ನೈಟ್ರಸ್‌ಆಕ್ಸೈಡ್‌ನ ತನ್ನ ಅನುಭವವನ್ನು ತಿಳಿಸಿದನಲ್ಲದೆ ಬೋಸ್ಟನ್‌ನಲ್ಲಿ ಅದರ ಪ್ರಯೋಗಕ್ಕೆ ಸಹಾಯ ಮಾಡುವಂತೆ ಕೇಳಿಕೊಂಡ. ಇಂತಹ

ವಿಷಯಗಳಲ್ಲಿ ಆಸಕ್ತಿ ಇಲ್ಲದ ಮಾರ್ಟನ್ ತನ್ನ ಗುರುವಾಗಿದ್ದ ವೆಲ್ಸ್‌ನನ್ನು ನಿರಾಕರಿಸುವಂತಿರಲಿಲ್ಲ. ತನಗೆ ಪರಿಚಯವಾದ ರಸಾಯನಶಾಸ್ತ್ರ ಪರಿಣಿತ ಪ್ರೊಫೆಸರ್ ವಿಲಿಯಂ ಜಾಕ್ಸನ್ ಎಂಬುವನಿಗೆ ಪರಿಚಯಿಸಿದ.

ಪ್ರೊಫೆಸರ್ ಜಾಕ್ಸನ್ ವೈಜ್ಞಾನಿಕ ಕ್ಷೇತ್ರದಲ್ಲಿ ಹೆಸರು ಗಳಿಸಿದವನಾದರೂ ಅಹಂಕಾರ ಮತ್ತು ಸ್ವಪ್ರತಿಷ್ಠೆಗಳ ಸಾಕಾರಮೂರ್ತಿ. ಇತರರಿಂದ ಪ್ರಸಿದ್ಧಿಗೆ ಬಂದ ಹಲವಾರು ಶೋಧನೆಗಳಿಗೆ ತಾನೇ ಮೂಲಪುರುಷನೆಂದು ಆಗಾಗ್ಗೆ ಜಿಜ್ಞಾಸೆಗಳನ್ನೆಬ್ಬಿಸುವುದು ಅವನ ಹವ್ಯಾಸ. ನೈಟ್ರಸ್ ಆಕ್ಸೈಡ್ ಬಗೆಗೆ ವೆಲ್ಸ್‌ನ ಅನುಭವವನ್ನು ಯಾವ ಚರ್ಚೆಯೂ ಇಲ್ಲದೆ ಅಲ್ಲಗಳೆದ. ದೊಡ್ಡ ನಗರಗಳ ಪ್ರಯೋಗಶಾಲೆಗಳಲ್ಲಿ ಸಂಶೋಧನೆ ನಡೆಸುತ್ತಿರುವ ಹೆಸರಾಂತ ವಿಜ್ಞಾನಿಗಳೇ ನೋವನ್ನು ಹೋಗಲಾಡಿಸುವ ಮದ್ದನ್ನು ಕಂಡುಹಿಡಿಯಲು ಅಸಾಧ್ಯವಾಗಿರುವಾಗ ಹಳ್ಳಿಯೊಂದರ ದಂತವೈದ್ಯನಿಂದ ಇಂತಹ ಸಂಶೋಧನೆ ಅಸಾಧ್ಯವೆಂದು ವಾದಿಸಿ ಅವರನ್ನು ನಿರಾಶೆಗೊಳಿಸಿದ.

ವೆಲ್ಸ್ ಧೃತಿಗೆಡದೆ, ನೇರವಾಗಿ ಜೆ. ಸಿ. ವಾರೆನ್‌ನನ್ನೇ ಭೇಟಿಮಾಡಿ ನೈಟ್ರಸ್ ಆಕ್ಸೈಡ್ ನೋವಿನ ನಿವಾರಣೆಗೆ ನೆರವಾಗುವ ಸಾಧ್ಯತೆಯನ್ನು ನಿವೇದಿಸಿಕೊಂಡನು. ವೆಲ್ಸ್‌ನ ಸರಳತೆ ಮತ್ತು ಶಸ್ತ್ರಚಿಕಿತ್ಸೆಯಲ್ಲಿ ನೋವಿನ ಹಾವಳಿಯನ್ನು ಅಂತ್ಯಗೊಳಿಸುವ ಸಾಧ್ಯತೆಯ ಆಶೆಯಿಂದ ಆದರ ಬಹಿರಂಗ ಪ್ರಯೋಗಕ್ಕೆ ಸಮ್ಮತಿಸಿದ.

ಬೋಸ್ಟನ್‌ನ ಮೆಸ್ಸಾಚೂಟಸ್ ಜನರಲ್ ಆಸ್ಪತ್ರೆಯ ವಿಶಾಲ ಶಸ್ತ್ರಚಿಕಿತ್ಸಾಗಾರದ ಗ್ಯಾಲರಿಯಲ್ಲಿ ಆ ದಿನ ವೈದ್ಯರು, ವಿದ್ಯಾರ್ಥಿಗಳ ಕಿಕ್ಕಿರಿದ ಜನಸಂದಣಿ. ವೈದ್ಯಕೀಯ ಇತಿಹಾಸದಲ್ಲೇ ಕಂಡು ಕೇಳರಿಯದ ಚಿಕಿತ್ಸಾ ವಿಧಾನದ ಬಹಿರಂಗ ಪ್ರದರ್ಶನವನ್ನು ವೀಕ್ಷಿಸುವ ಸಡಗರ.

ಶಸ್ತ್ರಚಿಕಿತ್ಸಾ ಮೇಜಿನ ಸುತ್ತ ಡಾ. ವಾರೆನ್, ವೆಲ್ಸ್, ಮಾರ್ಟನ್ ಮತ್ತಿತರ ಸಹಾಯಕ ವೈದ್ಯರ ಗುಂಪು. ಮೊದಲು ಆ ದಿನದ ಪ್ರಯೋಗದ ಬಗೆಗೆ ವಾರೆನ್‌ನಿಂದ ಸಂಕ್ಷಿಪ್ತ ಭಾಷಣ. ಪ್ರಯೋಗಕ್ಕೆ ಸ್ವಯಂಪ್ರೇರಣೆಯಿಂದ ಹಲ್ಲು ಕೀಳಿಸಲು ಮುಂದಾಗುವಂತೆ ಕೋರಿಕೆ (ಮೊದಲೇ ನಿಯೋಜಿತನಾದ ರೋಗಿ ಹೆದರಿಕೆಯಿಂದ ಆಸ್ಪತ್ರೆಯಿಂದ ಪಲಾಯನ ಮಾಡಿದ್ದ

ನಂತೆ !) ಪ್ರೇಕ್ಷಕರ ಗ್ಯಾಲರಿಯಿಂದ ದೃಢಕಾಯನಾದ ದಡೂತಿಯ ಆಸಾಮಿ ಹಲ್ಲು ಕೀಳಿಸಿಕೊಳ್ಳಲು ಮುಂದಾಗಿ ಬಂದು ಮೇಜಿನಲ್ಲಿ ಮಲಗಿದ.

ವೆಲ್ಸ್ ಕೆಲಸ ಶುರು ಮಾಡುವ ಮೊದಲು ನೈಟ್ರಸ್ ಆಕ್ಸೈಡ್‌ನ ಬಳಕೆಯ ಬಗೆಗೆ ತನ್ನ ಅನುಭವ ವಿವರಿಸಿದ. ರೋಗಿಯನ್ನು ಕುರ್ಚಿಯೊಂದರಲ್ಲಿ ಕೂರಿಸಿ, ಅನಿಲವನ್ನು ಸೇವಿಸುವಂತೆ ಮಾಡಿದ. ಮೊದಲು ಸ್ವಲ್ಪ ಒದ್ದಾಡಿ ನಂತರ ಪ್ರಜ್ಞೆ ತಪ್ಪಿದವನಂತಾದ. ಅವನ ಬಾಯಿಯನ್ನು ತೆರಸಿ ಹಲ್ಲಿಗೆ ಚಿಮ್ಮಟ ಹಾಕಿ ವೆಲ್ಸ್ ಜೋರಾಗಿ ಜಗ್ಗಿಸಿದ. ರೋಗಿ ಅಷ್ಟರಲ್ಲೇ ಎಚ್ಚರವಾದಂತಾಗಿ, ಒದ್ದಾಡಿ ಕೂಗಲು ಶುರುಮಾಡಿದ. ಆದರೂ ವೆಲ್ಸ್ ಹಲ್ಲನ್ನು ಕಿತ್ತು ಬಿಸಾಡಿದ.

ರೋಗಿ ಒದ್ದಾಡಿ ಕೂಗುತ್ತಿದ್ದಂತೆ ಗ್ಯಾಲರಿಯಿಂದ ವಿದ್ಯಾರ್ಥಿಗಳ ಚೀತ್ಕಾರ....ಮೋಸ, ಮೋಸ ಎಂದು ಅವರೆಲ್ಲಾ ಅರಚಿ ವೆಲ್ಸ್‌ನನ್ನು ಲೇವಡಿಮಾಡಿ ಗಲಾಟೆಯೆಬ್ಬಿಸಿದರು. ವೆಲ್ಸ್‌ನ ಮುಖ ಸಪ್ಪೆಯಾಗಿ ಬೆವರಿತು. ಕಣ್ಣೀರು ಬಂದು ತಲೆ ತಗ್ಗಿತು. ಪಕ್ಕದಲ್ಲಿದ್ದ ಶಿಷ್ಯ ಮಾರ್ಟನ್ ಪಲಾಯನ ಮಾಡಿದ. ನಿರಾಶೆ ಹೊಂದಿದ ವಾರೆನ್, ವಿದ್ಯಾರ್ಥಿಗಳು ವೆಲ್ಸ್‌ನ ಮೇಲೆ ಕೈಮಾಡಬಹುದೆಂಬ ಶಂಕೆಯಿಂದ ಅವರನ್ನೆಲ್ಲಾ ಕೂಡಲೇ ಹೊರಗೆ ಹೋಗುವಂತೆ ಆಜ್ಞಾಪಿಸಿದ. ವೆಲ್ಸ್‌ನನ್ನು ದುರುಗುಟ್ಟಿ ನೋಡಿ ಅವನೂ ಹೊರಟುಹೋದ. ವೆಲ್ಸ್ ತನ್ನ ಸಲಕರಣೆಗಳನ್ನು ಚೀಲದಲ್ಲಿ ತುಂಬಿಕೊಂಡು ಗುಂಪಿನಲ್ಲಿ ತಲೆಮರೆಸಿ ಅಲ್ಲಿಂದ ಹೊರಬಿದ್ದ !

ನೈಟ್ರಸ್ ಆಕ್ಸೈಡ್ ಆ ದಿನ ಅವನನ್ನು ಅವಮಾನಗೊಳಿಸಿದ್ದು ವೆಲ್ಸ್ ತಡೆಯಲಾರದಾದ. ಅವನೆಂದೂ ಅಂತಹ ಪರಿಹಾಸ್ಯಕ್ಕೊಳಗಾದವನಲ್ಲ. ವೈದ್ಯಸಮೂಹದಲ್ಲಿ ಆ ದಿನ ಅವನಿಗಾದ ಸೋಲು ಮಂಕುಕವಿಯುವಂತೆ ಮಾಡಿತು. ಮುಂದೆ ಹಾರ್ಟ್‌ಫೋರ್ಡ್‌ನಲ್ಲಿ ನೈಟ್ರಸ್ ಆಕ್ಸೈಡ್ ಬಳಸಿ ತನ್ನ ವೃತ್ತಿಯನ್ನು ಮುಂದುವರಿಸಿದನಾದರೂ ಹಿಂದಿನ ಉತ್ಸಾಹವಿರಲಿಲ್ಲ. ಸದಾ ಚಿಂತಾಕ್ರಾಂತನಾದ ವೆಲ್ಸ್ ಕೆಲ ಸಮಯ ಚಿಕಿತ್ಸಾಲಯವನ್ನೇ ಮುಚ್ಚಬೇಕಾಯಿತು.

**ವಿಲಿಯಂ ಮಾರ್ಟನ್ :**

ಬೋಸ್ಟನ್ ನಗರದವನೇ ಆದ ವಿಲಿಯಂ ಮಾರ್ಟನ್ ಹಾರ್ಟ್

ಫೋರ್ಡ್‌ನಲ್ಲಿ ವೆಲ್ಸ್‌ನ ಚಿಕಿತ್ಸಾಲಯದಲ್ಲಿ ತರಬೇತಿ ಪಡೆದಿದ್ದ. ಬೋಸ್ಟನ್‌ನಲ್ಲಿ ವೃತ್ತಿಪರನಾಗಿದ್ದು ಹೆಚ್ಚು ಹಣಗಳಿಸಿ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳಿಸಬೇಕೆಂಬ ಹಂಬಲ ಅವನದು. ದಂತ ವೈದ್ಯಕೀಯವೇ ಅಲ್ಲದೆ ವೈದ್ಯಕೀಯ ಅನುಭವವನ್ನು ಪಡೆಯಲು ಸಮಯವಿದ್ದಾಗ ಮೆಡಿಕಲ್ ಕಾಲೇಜಿಗೂ ಹೋಗುವ ಹವ್ಯಾಸ ಇಟ್ಟುಕೊಂಡಿದ್ದ. ತನಗೆ ಪ್ರಯೋಜನಕ್ಕೆ ಬಾರದಿರುವ ಯಾವ ಕಾರ್ಯಗಳಿಗೂ ವೃಥಾ ಕಾಲಹರಣ ಮಾಡುವವನಲ್ಲ. ಅವನೆಲ್ಲಾ ಕೃತಿಗಳಲ್ಲೂ ವ್ಯವಹಾರಿಕ ಪ್ರವೃತ್ತಿ ನೆಲೆಸಿರುತ್ತಿತ್ತು.

ಬೋಸ್ಟನ್ ಆಸ್ಪತ್ರೆಯಲ್ಲಿ ಮಾರ್ಟನ್ ನೋವಾಗದೆ ಹಲ್ಲು ಕೀಳುವಲ್ಲಿ ವಿಫಲನಾದ ಘಟನೆ ಮಾರ್ಟನ್‌ನನ್ನು ಯೋಚಿಸುವಂತೆ ಮಾಡಿತು. ತನ್ನ ಗುರುವಿನ ಕಾರ್ಯದಕ್ಷತೆಯಲ್ಲಿ ನಂಬಿಕೆಯಿದ್ದ ಮಾರ್ಟನ್ ನೈಟ್ರಸ್ ಆಕ್ಸೈಡ್‌ನ ಸತ್ವದ ಬಗೆಗೆ ಅನುಮಾನ ತಾಳಲಿಲ್ಲ. ವ್ಯಾಪಾರಿ ಮನೋಭಾವದ ಮಾರ್ಟನ್ ಆ ಬಗ್ಗೆ ಹೆಚ್ಚು ಮಾಹಿತಿ ಗಳಿಸಿ ತಾನೇಕೆ ಅದರ ಪ್ರಯೋಗ ಮಾಡಬಾರದೆಂದು ಯೋಚಿಸಿದ. ವಿಷಯ ತಿಳಿಯಲು ಹಾರ್ಟ್‌ಫೋರ್ಡ್‌ಗೆ ತೆರಳಿ ವೆಲ್ಸ್‌ನನ್ನು ಭೇಟಿಯಾದರೂ ಅವನ ಮಾನಸಿಕ ಸ್ಥಿತಿ ಹದಗೆಟ್ಟಿದ್ದರಿಂದ ಹೆಚ್ಚಿನ ವಿವರಣೆ ದೊರೆಯಲಿಲ್ಲ. ಈ ಬಗೆಗೆ ಮತ್ತೆ ಜಾಕ್ಸನ್‌ನನ್ನು ಸಂಧಿಸುವ ಯೋಚನೆ ಮಾಡಿದ.

**ಚಾರ್ಲ್ಸ್ ಜಾಕ್ಸನ್ :**

ಬೋಸ್ಟನ್‌ನ ಚಾರ್ಲ್ಸ್ ಜಾಕ್ಸನ್ ವಿಜ್ಞಾನದ ಹಲವು ವಿಭಾಗಗಳಲ್ಲಿ ಪರಿಶ್ರಮವಿದ್ದ ವಿಚಿತ್ರವ್ಯಕ್ತಿ. ಯೂರೋಪ್ ಮತ್ತು ಅಮೆರಿಕಾದ ಕೆಲವು ವಿಶ್ವವಿದ್ಯಾಲಯಗಳಲ್ಲಿ ರಸಾಯನಶಾಸ್ತ್ರ, ಭೌತಶಾಸ್ತ್ರ ಮತ್ತು ಭೂಗರ್ಭ ಶಾಸ್ತ್ರಗಳಲ್ಲಿ ಪ್ರಾವೀಣ್ಯತೆ ಗಳಿಸಿದ್ದ. ವೈಜ್ಞಾನಿಕ ಕ್ಷೇತ್ರದಲ್ಲಿ ತನ್ನನ್ನು ಮೀರಿಸುವವರೇ ಇಲ್ಲವೆಂಬ ಅಹಂಭಾವ, ಸ್ವಪ್ರತಿಷ್ಠೆ, ಮಾರ್ಸ್ ಕಂಡು ಹಿಡಿದ ಟೆಲಿಗ್ರಾಫಿಕ್ ಸಂಕೇತ, ವಿಲಿಯಂ ಬ್ಯೂಮಾಂಟ್ ಜಠರದಲ್ಲಿ ಗುರುತಿಸಿದ ಹೈಡ್ರೋಕ್ಲೋರಿಕ್ ಆಸಿಡ್ ಮುಂತಾದ ಸಂಶೋಧನೆಗಳಿಗೆಲ್ಲಾ ತಾನೇ ಕಾರಣನೆಂಬ ವಾದಗಳನ್ನೇ ಮುಂದಿಟ್ಟು ವೈಜ್ಞಾನಿಕ ಕ್ಷೇತ್ರದಲ್ಲಿ ಗಲಾಟೆ ಎಬ್ಬಿಸಿದ್ದನು.

ವಿಲಿಯಂ ಮಾರ್ಟನ್ ತನ್ನ ಉದ್ದೇಶ ಸಾಧನೆಗೆ ರಸಾಯನಶಾಸ್ತ್ರ ಪರಿಣಿತ ಚಾರ್ಲ್ಸ್ ಜಾಕ್ಸನ್ ಸಹಾಯ ಮಾಡಬಹುದೆಂಬ ಆಶೆಯಿಂದ ನೈಟ್ರಸ್ ಆಕ್ಸೈಡ್ ಬಗೆಗೆ ಹೆಚ್ಚಿನ ಮಾಹಿತಿ ಒದಗಿಸುವಂತೆ ವಿನಂತಿಸಿಕೊಂಡ. ಸ್ವಪ್ರತಿಷ್ಠೆಯಿಂದ ಹಿಂದೆ ವೆಲ್ಸ್ ಭೇಟಿ ಮಾಡಿದಾಗ ನೈಟ್ರಸ್ ಆಕ್ಸೈಡ್‌ಗೆ ಅಂತಹ ಗುಣಗಳೇ ಇಲ್ಲವೆಂದವನು, ಮತ್ತೊಮ್ಮೆ ಅಲ್ಲಗಳೆದ. ಆದರೆ ಸಲ್ಫ್ಯೂರಿಕ್ ಈಥರ್ ಎಂಬ ದ್ರಾವಣಕ್ಕೆ ಅಂತಹ ಗುಣಗಳಿರುವುದಾಗಿ ಹೇಳಿ ಅದರ ವಿವರಣೆಯನ್ನೊದಗಿಸಿದನು. ಅದು ದೊರೆಯುವ ಅಂಗಡಿ ಮತ್ತು ತಯಾರಿಸುವ ವಿಧಾನವನ್ನು ಮಾರ್ಟನ್ ಅವನಿಂದ ಪಡೆದು, ಆ ದಿನ ಅದನ್ನು ಕೊಂಡನು.

**ಈಥರ್ :**

ಸಲ್ಫ್ಯೂರಿಕ್ ಈಥರನ್ನು ಪ್ರಯೋಗಿಸುವ ಅವಕಾಶ ಮಾರ್ಟನ್‌ಗೆ ಆ ದಿನ ಸಾಯಂಕಾಲವೇ ಒದಗಿತು. ವಿಪರೀತ ಹಲ್ಲಿನ ಬಾಧೆಯಿಂದ ನರಳುತ್ತಿದ್ದ ಇಬನ್‌ಫ್ರಾಸ್ಟ್‌ಯೆಂಬವ ನೋವಾಗದಂತೆ ಹಲ್ಲು ಕೀಳುವಂತೆ ಅಂಗಲಾಚಿದ. ಅವನನ್ನು ಕುರ್ಚಿಯಲ್ಲಿ ಕೂರಿಸಿ, ಈಥರ್‌ನಿಂದ ತೋಯಿಸಿದ ಕರವಸ್ತ್ರವನ್ನು ಅವನ ನಾಸಿಕ ದ್ವಾರದಲ್ಲಿರಿಸಿದ. ಅದರ ಸೇವನೆಯಿಂದ ಜ್ಞಾನ ತಪ್ಪುವವರೆಗೂ ಈಥರನ್ನು ಅದರ ಮೇಲೆ ಸುರಿದ, ಸ್ವಲ್ಪ ಒದ್ದಾಡಿ ಫ್ರಾಸ್ಟ್ ಜ್ಞಾನ ತಪ್ಪಿದಂತಾಗಿ ಸುಮ್ಮನಾದ. ಮಾರ್ಟನ್ ಅವನ ಬಾಯಿ ತೆರಸಿ ತೆಗೆಯಬೇಕಾಗಿದ್ದ ಹಲ್ಲನ್ನು ಕಿತ್ತು ಬಿಸಾಡಿದ. ಫ್ರಾಸ್ಟ್ ಸ್ವಲ್ಪವೂ ಅಲುಗಾಡಲಿಲ್ಲ. ನೋವೆಂದು ಗಲಾಟೆ ಮಾಡಲಿಲ್ಲ ! ಅಲ್ಲಿ ನೆರೆದಿದ್ದವರೆಲ್ಲಾ ಚಕಿತರಾದರು. ಹೊಸ ಪ್ರಪಂಚವನ್ನೇ ಕಂಡಷ್ಟು ಹರ್ಷ ಮಾರ್ಟನ್‌ಗೆ. ಫ್ರಾಸ್ಟ್‌ಗಂತೂ ವಿವರಿಸಲಾರದಷ್ಟು ಸಂತೋಷ.

ಸಂತೋಷದಬರದಲ್ಲೂ ವ್ಯವಹಾರಿಕ ಬುದ್ಧಿ ಮಾರ್ಟನ್‌ನನ್ನು ಚುರುಕುಗೊಳಿಸಿತು. ನೋವಾಗದೆ ಹಲ್ಲು ಕೀಳಿಸಿಕೊಂಡ ಬಗೆಗೆ ಫ್ರಾಸ್ಟ್‌ನಿಂದ ಪ್ರಶಸ್ತಿಪತ್ರ ಬರೆಸಿದ್ದಲ್ಲದೆ, ಅಲ್ಲಿದ್ದವರೆಲ್ಲರ ಸಾಕ್ಷ್ಯ ಬರೆಸಿದ. ಅಲ್ಲಿಯ ದಿನಪತ್ರಿಕೆಯ ಕಛೇರಿಗೆ ಹೋಗಿ ಈ ಅದ್ಭುತ ಸಮಾಚಾರ ಮರುದಿನ ಪ್ರಕಟವಾಗುವ ಏರ್ಪಾಟು ಮಾಡಿದ. ಆದರೆ ಅವನು ಆ ದಿನ

ಉಪಯೋಗಿಸಿದ ರಸಾಯನಿಕ ದ್ರಾವಣದ ಹೆಸರು ಫ್ರಾಸ್ಟ್‌ನ ಪ್ರಶಸ್ತಿಪತ್ರದಲ್ಲಾಗಲೀ, ಪತ್ರಿಕೆಯಲ್ಲಾಗಲೀ ನಮೂದಾಗಲಿಲ್ಲ !

ಮುಂದೆ ಹಲವಾರು ರೋಗಿಗಳಿಗೆ ಈಥರನ್ನು ಬಳಸಿ ಮಾರ್ಟನ್ ನೋವಾಗದಂತೆ ಹಲ್ಲು ಕೀಳಲಾರಂಭಿಸಿದ. ಈಥರ್‌ನ ನಿಜಸ್ಥಿತಿ ಯಾರಿಗೂ ತಿಳಿಯದಿರಲೆಂದು ಅದಕ್ಕೆ ಕೆಲವು ಸುಗಂಧಗಳನ್ನು ಸೇರಿಸಿ ಅದರ ವಾಸನೆಯನ್ನು ಮಸಕುಮಾಡಿದ ! ಅವನ ಸಂಪಾದನೆ ನೂರ್ಮಡಿಯಾಯಿತು.

ವೈದ್ಯಕೀಯ ರಂಗದಲ್ಲಿ ಈಥರ್ ಬಳಸುವಂತಾದರೆ ಇನ್ನೂ ಹೆಚ್ಚಿನ ಸಂಪಾದನೆಯಾಗಬಹುದೆಂಬ ಆಶೆ ಅವನ ಬೆನ್ನು ಹತ್ತಿತು. ಅದಕ್ಕೆ ಡಾ. ವಾರೆನ್‌ನ ಸಮ್ಮುಖದಲ್ಲಿ ಅದು ಪ್ರಯೋಗಿಸಲ್ಪಡುವುದು ಅನಿವಾರ್ಯವೆಂಬುದನ್ನರಿತ. ಆದರೆ ಹಿಂದೆ ವೆಲ್ಸ್‌ನ ಪ್ರಯೋಗ ವಿಫಲವಾದ ಹಿನ್ನೆಲೆಯಲ್ಲಿ ಅಂತಹ ಅವಕಾಶ ದೊರೆಯಲಾರದೆಂಬ ಶಂಕೆ. ವಾರೆನ್ ಮುಖ್ಯ ಸಹಾಯಕ ಜೇಕಬ್ ಬಿಗೆಲೋನ ಮೂಲಕ ತನ್ನ ಉದ್ದೇಶ ಸಾಧಿಸಿದ.

**ಅಕ್ಟೋಬರ್ ೧೬, ೧೮೪೬ :**

ವೈದ್ಯಕೀಯ ಇತಿಹಾಸದಲ್ಲಿ ಅದೊಂದು ಸ್ಮರಣೀಯ ದಿನ. ಹೊಸದೊಂದು ಪ್ರಯೋಗಕ್ಕಾಗಿ ಮೆಸ್ಸಾಚುಟಸ್ ಜನರಲ್ ಆಸ್ಪತ್ರೆಯ ಶಸ್ತ್ರ ಚಿಕಿತ್ಸಾಗಾರದಲ್ಲಿ ಕಿಕ್ಕಿರಿದ ವೈದ್ಯಸಮೂಹ, ವಾರೆನ್ ಮತ್ತು ಅವನ ಸಹಾಯಕರು, ಮೇಜಿನ ಮೇಲೆ ಆ ದಿನದ ಪ್ರಯೋಗಕ್ಕೆ ಕೆಳದವಡೆಯಲ್ಲಿ ಗೆಡ್ಡೆಯಿರುವ ರೋಗಿಯೊಬ್ಬನನ್ನು ಮಲಗಿಸಿ ಶಸ್ತ್ರಚಿಕಿತ್ಸೆಗೆ ಅಣಿಯಾಗಿ ನಿಂತಿದ್ದಾರೆ. ಆದರೆ ಆ ಸಮಯಕ್ಕೆ ಹಾಜರಾಗುವುದಾಗಿ ಭರವಸೆ ಕೊಟ್ಟಿದ್ದ ಮಾರ್ಟನ್ ನಾಪತ್ತೆ !

"ಮಹನೀಯರೇ ನೋವಾಗದಂತೆ ಮದ್ದು ನೀಡುವ ಭರವಸೆಯಿತ್ತ ಡಾ. ಮಾರ್ಟನ್ ಇನ್ನೂ ಬಂದಿಲ್ಲ. ಅವರು ಇನ್ನೆಲ್ಲೋ ಕಾರ್ಯಮಗ್ನರಾಗಿರಬಹುದು. ನಾನು ಮೊದಲಿನಂತೆ ಚಿಕಿತ್ಸೆ ನಡೆಸುವೆ" ಎಂಬ ಉದ್ಗಾರದೊಡನೆ ವಾರೆನ್ ಚಿಕಿತ್ಸೆ ನಡೆಸುವ ಸನ್ನಾಹ ಮಾಡಿದ.

ಶಸ್ತ್ರಚಿಕಿತ್ಸಾ ಕೊಠಡಿಯ ಬಾಗಿಲು ಹಠಾತ್ತನೆ ತೆರೆಯಿತು. ಬುಸುಗುಟ್ಟುತ್ತಾ ಓಡಿಬಂದ ಮಾರ್ಟನ್ ಒಳಗೆ ಬಂದು ಎಲ್ಲರಿಗೂ ನಮಸ್ಕರಿಸಿದ.

"ನಿಮ್ಮ ಪ್ರಯೋಗಕ್ಕೆ ರೋಗಿ ತಯಾರಾಗಿದ್ದಾನೆ. ನೀವು ಕೆಲಸ ಆರಂಭಿಸಿ" ವಾರೆನ್ ನುಡಿದು ರೋಗಿಯತ್ತ ಅವನಿಗೆ ದಾರಿ ಮಾಡಿದ.

ಮಾರ್ಟನ್, ತಾನು ಉಪಯೋಗಿಸುವ ದ್ರಾವಣದ ಗಾಜಿನ ಬುರುಡೆಯ ಮಾರ್ಪಾಡಿಗಾಗಿ ಕೊಟ್ಟ ಅಂಗಡಿಯವನು, ಅದನ್ನು ಹಿಂದಿರುಗಿಸುವುದು ವಿಳಂಬವಾದುದರಿಂದ ತಾನು ತಡವಾಗಿ ಬರಬೇಕಾಯಿತೆಂದು ಅವರಲ್ಲಿ ಕ್ಷಮೆ ಯಾಚಿಸಿದ. ರೋಗಿಯ ಬಳಿಸಾರಿ ತಾನು ಪ್ರಜ್ಞೆ ತಪ್ಪಿಸುವ ರೀತಿಯನ್ನು ವಿವರಿಸಿ, ಸಹಕರಿಸುವಂತೆ ವಿನಂತಿಸಿದ.

ಹೊಸದಾಗಿ ಮಾರ್ಪಾಡು ಮಾಡಿದ ಗಾಜಿನಬುರುಡೆಯಿಂದ ಹೊರಬಂದ ರಬ್ಬರ್‌ನಾಳವನ್ನು ರೋಗಿಯ ಬಾಯೊಳಗಿಟ್ಟು ಚೆನ್ನಾಗಿ ಉಸಿರಾಡುವಂತೆ ಮಾಡಿದ. ರೋಗಿ ಕೆಲಕಾಲ ಒದ್ದಾಡಿದರೂ ನಂತರ ಪೂರ್ಣ ಪ್ರಜ್ಞಾಹೀನನಾದ. ಮಾರ್ಟನ್, ವಾರೆನ್ ಕಡೆ ತಿರುಗಿ,

"ಸ್ವಾಮಿ, ತಮ್ಮ ಚಿಕಿತ್ಸೆಗೆ ರೋಗಿ ತಯಾರಾಗಿದ್ದಾನೆ, ತಾವು ಮುಂದುವರಿಯಬಹುದು" ಎಂದು ವಿನಂತಿಸಿದ.

ವಾರೆನ್ ರೋಗಿಯ ಗೆಡ್ಡೆಯ ಮೇಲಿನ ಚರ್ಮದಲ್ಲಿ ಚಾಕುವಿನಿಂದ ಕೊಯ್ಯಲು ಆರಂಭಿಸಿದ. ರೋಗಿ ಚಲಿಸಲಿಲ್ಲ, ಕೂಗಲಿಲ್ಲ! ಚಕಿತನಾದ ವಾರೆನ್ ತನ್ನ ಕೆಲಸವನ್ನು ಮುಂದುವರೆಸಿ ಗೆಡ್ಡೆಯನ್ನು ಸಂಪೂರ್ಣವಾಗಿ ತೆಗೆದ. ರಕ್ತಸ್ರಾವ ನಿಲ್ಲಿಸಲು ಕಾದ ಕಬ್ಬಿಣದ ಸಲಾಕೆಗಳಿಂದ ರಕ್ತನಾಳಗಳನ್ನು ಸುಟ್ಟ. ಆದರೆ ರೋಗಿಯಿಂದ ಯಾವ ಪ್ರತಿಕ್ರಿಯೆಯೂ ಇಲ್ಲ.

ಗ್ಯಾಲರಿಯಲ್ಲಿದ್ದ ವೈದ್ಯಸಮೂಹ ಮತ್ತು ವಿದ್ಯಾರ್ಥಿ ಸೋಜಿಗವನ್ನು ನೋಡಿ ಸ್ತಬ್ಧರಾದರು. ವೈದ್ಯಕೀಯ ಇತಿಹಾಸದಲ್ಲೇ ನೋವಾಗದ ಶಸ್ತ್ರಚಿಕಿತ್ಸೆಯನ್ನು ವೀಕ್ಷಿಸಿದ ಹೆಮ್ಮೆ ಅವರೆಲ್ಲರಿಗೆ. ಅತ್ಯಾನಂದದಿಂದ ಚಿಕಿತ್ಸೆ ಮುಗಿಸಿದ ವಾರೆನ್ ಅವರನ್ನುದ್ದೇಶಿಸಿ, "ಮಹನೀಯರೆ, ಇದು ಮೋಸವಲ್ಲ, ಮೋಸವಲ್ಲ" ಎಂದು ಘೋಷಣೆ ಮಾಡಿದ. ಎಚ್ಚರಗೊಂಡ ರೋಗಿಯೂ ಸಹ ಹರ್ಷಚಿತ್ತನಾಗಿ ತನ್ನ ಕೃತಜ್ಞತೆ ಸೂಚಿಸಿದ.

ಜೀವಮಾನವನ್ನೆಲ್ಲಾ ನೋವಿನಿಂದ ನರಳುವ ರೋಗಿಗಳೊಡನೆ ಕಳೆದಿದ್ದ ವಾರೆನ್‌ಗೆ ಆದಷ್ಟು ಸಂತೋಷ ಆ ದಿನ ಬೇರಾರಿಗೂ ಆಗಿರ

ಲಾರದು. ಮುಂದೆ ಶಸ್ತ್ರಚಿಕಿತ್ಸಾ ಪದ್ಧತಿಯಲ್ಲಾಗಬಹುದಾದ ಪ್ರಗತಿಯ ಚಿತ್ರ ಅವನ ಕಣ್ಮುಂದೆ ಗೋಚರಿಸಿದಂತಾಗಿ ಆನಂದಬಾಷ್ಪಗಳಾದುವು. ಅದರ ಯಶಸ್ಸಿಗೆ ಕಾರಣನಾಗುವ ಮಾರ್ಟನ್‌ನನ್ನು ಬಾಯಿತುಂಬ ಹೊಗಳಿ ಮಾನವಕುಲದ ಕಲ್ಯಾಣಕ್ಕೆ ಅವನ ಕೊಡುಗೆ ಸೂರ್ಯಪ್ರಕಾಶದಂತೆ ಯಾವ ಅಡ್ಡಿ ಆತಂಕಗಳೂ ಆಗದೆ ದೊರೆಯಲೆಂದು ಹಾರೈಸಿದ.

ಆ ದಿನವೂ ಮಾರ್ಟನ್, ವಾರೆನ್ ಮತ್ತು ಇತರ ವೈದ್ಯರಿಂದ ಪ್ರಶಸ್ತಿಪತ್ರ ಪಡೆಯಲು ಮರೆಯಲಿಲ್ಲ. ಬೋಸ್ಟನ್‌ನ ವೃತ್ತಪತ್ರಿಕೆಗಳಲ್ಲೂ ಸುದ್ದಿಯನ್ನು ಪ್ರಕಟ ಮಾಡಿಸಿದ. ಮುಂದಿನ ಕೆಲವು ದಿನ ಅದೇ ಆಸ್ಪತ್ರೆಯಲ್ಲಿ ಇನ್ನೂ ಕೆಲವು ರೋಗಿಗಳಿಗೆ ಈಥರ್ ಪ್ರಯೋಗ ಮಾಡಿ, ನೋವಿಲ್ಲದೆ ಶಸ್ತ್ರಚಿಕಿತ್ಸೆ ನಡೆಸಲು ಸಹಕರಿಸಿದ.

ಮಾರ್ಟನ್ ಇದೇ ರೀತಿ ಹಲವಾರು ಆಸ್ಪತ್ರೆಗಳಲ್ಲಿ ರೋಗಿಗಳನ್ನು ಮೂರ್ಛೆ ಬರಿಸುವಲ್ಲಿ ಯಶಸ್ವಿಯಾದರೂ, ತಾನು ಉಪಯೋಗಿಸುತ್ತಿದ್ದ ರಸಾಯನಿಕ ದ್ರಾವಣ ಯಾವುದೆಂಬುದನ್ನು ಹೊರಗೆಡಹಲಿಲ್ಲ. ಅದರ ಮೊದಲ ಪ್ರಯೋಗಕ್ಕೆ ನಾಂದಿ ಮಾಡಿದ ಬಿಗೆಲೋ ಈ ವಿಷಯದಲ್ಲಿ ಒತ್ತಾಯ ಮಾಡಿದರೂ ಮಾರ್ಟನ್ ನಿರಾಕರಿಸಿದ. ವೈದ್ಯಕೀಯ ರಂಗದಲ್ಲಿ ಇದೊಂದು ವಿಚಿತ್ರ ನಡೆವಳಿಕೆ. ಹೊಸ ಔಷಧ ಅಥವಾ ಚಿಕಿತ್ಸಾ ವಿಧಾನವನ್ನು ಯಾರೇ ಕಂಡುಹಿಡಿದರೂ ಅವುಗಳ ಪ್ರಯೋಜನ ಮಾನವಜನಾಂಗಕ್ಕೆಲ್ಲಾ ದೊರೆಯಬೇಕೆಂಬ ಮಹತ್ವಾಕಾಂಕ್ಷೆಯಿಂದ ಅವರೇ ಅವುಗಳ ಪ್ರಚಾರ ಮಾಡುವುದು ವಾಡಿಕೆ. ರೋಗರುಜಿನಗಳಿಂದ ನರಳುವವರನ್ನು ಅವುಗಳಿಂದ ಬಿಡುಗಡೆ ಮಾಡುವುದೇ ವೈದ್ಯವೃತ್ತಿಯವರ ಘನಉದ್ದೇಶವಾದರೂ ಮಾರ್ಟನ್ ಅದನ್ನು ಲೆಕ್ಕಿಸಲಿಲ್ಲ.

**ಹೆಚ್ಚು ಸಂಪಾದನೆಯ ಗುರಿ :**

ಈಥರ್‌ನ ಯಶಸ್ಸು ಹೆಚ್ಚಿದಂತೆಲ್ಲಾ ಅದರಿಂದ ಹೆಚ್ಚಿನ ಆರ್ಥಿಕ ಪ್ರಯೋಜನ ಪಡೆಯಲು ಮಾರ್ಟನ್ ಹಲವಾರು ಯೋಜನೆಗಳನ್ನು ನಿರೂಪಿಸಿದ.

ತಾನು "ಕಂಡುಹಿಡಿದ" ಜ್ಞಾನ ತಪ್ಪಿಸುವ ಪದ್ಧತಿಗೆ ಸಮರ್ಪಕವಾದ ಹೆಸರೊಂದನ್ನು ಸೂಚಿಸಲು, ಅಮೆರಿಕಾದ ಹೆಸರಾಂತ ರಾಜಕಾರಣಿ,

ಸಾಹಿತಿ ಹಾಗೂ ವೈದ್ಯ ಡಾ. ಆಲಿವರ್ ವೆಂಡಲ್ ಹೋಮ್ಸ್‌ನನ್ನು ಸಂಪರ್ಕಿಸಿ, ಅದಕ್ಕೆ "ಅನೆಸ್ಥೀಸಿಯಾ" (*Anaesthesia*) ಎಂಬುದು ಸೂಕ್ತವೆಂದು ತಿಳಿದುಕೊಂಡ (ಕನ್ನಡದಲ್ಲಿ "ಅರಿವಳಿಕೆ" ಎಂಬ ಪದ ಇತ್ತೀಚಿಗೆ ಬಳಕೆಗೆ ಬರುತ್ತಿದೆ).

ಜ್ಞಾನ ತಪ್ಪಿಸುವ ಪದ್ಧತಿಯನ್ನು ಮೊದಲು ಶುರುಮಾಡಿದ ಹೊರೇಸ್‌ವೆಲ್ಸ್ ಮತ್ತು ಈಥರನ್ನು ಬಳಸಲು ಸೂಚಿಸಿದ ಚಾರ್ಲ್ಸ್ ಜಾಕ್ಸನ್‌ರಿಂದ ತನ್ನ ಯೋಜನೆಗೆ ಅಡ್ಡಿಗಳುಂಟಾಗಬಹುದೆಂಬ ಮುಂದಾಲೋಚನೆಯಿಂದ ಅವರನ್ನೂ ಸಂಪರ್ಕಿಸಿದ. ಮಾನಸಿಕ ಶಾಂತಿಯನ್ನು ಕಳೆದುಕೊಂಡಿದ್ದ ವೆಲ್ಸ್, ಜ್ಞಾನತಪ್ಪಿಸುವಂತಹ ಕಾರುಣ್ಯಮಯ ವೃತ್ತಿಯನ್ನು ವ್ಯಾಪಾರೀ ಮನೋಭಾವದಿಂದ ಹೆಚ್ಚು ಹಣಗಳಿಸಲು ಉಪಯೋಗಿಸುವುದು ಸರಿಯಲ್ಲವೆಂದು ತನ್ನ ಸಮ್ಮತಿ ನಿರಾಕರಿಸಿದ. ಜಾಕ್ಸನ್ ಅವನೊಡನೆ ಸಹಕರಿಸುವುದಾದರೆ, ಅದರಿಂದ ಬರುವ ಲಾಭದಲ್ಲಿ ಶೇಕಡ ೧೦ ರಷ್ಟನ್ನು ಕೊಡುವುದಾಗಿ ಅವನ ಮನ ಒಲಿಸಿಕೊಂಡನು.

ಈಥರ್‌ನ ವಾಸನೆ ಮಸುಕಾಗುವಂತೆ ಸುಗಂಧ ದ್ರವ್ಯಗಳನ್ನು ಮೊದಲೇ ಬೆರಸುತ್ತಿದ್ದ ಮಾರ್ಟನ್, ಈಗ ಹೆಸರೂ ಬಹಿರಂಗವಾಗದಂತೆ "ಲೆಥಿಯಾನ್" (*Letheon*) ಎಂದು ನಾಮಕರಣ ಮಾಡಿ ಅದರ ಬಳಕೆಗೆ ಸರ್ಕಾರದಿಂದ "ಸ್ವಾಮ್ಯಸನ್ನದ"ನ್ನು (*Patent*) ಪಡೆಯಲು ಅರ್ಜಿ ಸಲ್ಲಿಸಿದ. ತಯಾರಿಕೆ ಮತ್ತು ವಿತರಣೆಯ ಹಕ್ಕನ್ನು ತಾನೇ ಇರಿಸಿಕೊಂಡು, ಅದರ ಉಪಯೋಗದ ಬಗೆಗೆ ಕಟ್ಟುನಿಟ್ಟಾದ ನಿಬಂಧನೆಗಳನ್ನು ರೂಪಿಸಿದ. ಅಮೆರಿಕಾದ ವಿವಿಧ ನಗರಗಳಲ್ಲಿ ತನ್ನ ಪ್ರತಿನಿಧಿಗಳನ್ನು ನೇಮಿಸಿ, ಅಲ್ಲಿನ ವೈದ್ಯರು, ದಂತವೈದ್ಯರು, ಔಷಧಿ ಅಂಗಡಿಗಳವರು ಅವನ ನಿಯಮಗಳನ್ನು ಉಲ್ಲಂಘನೆ ಮಾಡದಂತೆ ಎಚ್ಚರವಹಿಸಿದ. ಯೂರೋಪಿನ ಕೆಲವು ನಗರಗಳಿಗೂ ಪ್ರತಿನಿಧಿಗಳನ್ನು ಕಳುಹಿಸಿ ಲೆಥಿಯಾನ್‌ನ ಬಳಕೆಯನ್ನೂ ಪ್ರಚಾರ ಮಾಡಿದ್ದಲ್ಲದೆ, ಅದರ ವಿತರಣೆ ಮತ್ತು ಉಪಯೋಗದ ಮೇಲೆ ಹತೋಟಿಯನ್ನಿಟ್ಟ. ಮಾರ್ಟನ್ ಹೆಸರು ವಿಶ್ವವ್ಯಾಪಿಯಾಗಿ, ಸಂಪಾದನೆ ಗಗನಕ್ಕೇರಿತು, ದುರಾಶೆಗೆ ಮಿತಿ ಇಲ್ಲದಾಯಿತು.

**ತಿರುವು :**

ಮೆಸ್ಸಾಚೊಟಸ್ ಜನರಲ್ ಆಸ್ಪತ್ರೆಯ ಹೇವರ್ಡ್ ಎಂಬ ವೈದ್ಯರ, ದಷ್ಟಪುಷ್ಟ ಮಹಿಳಾ ರೋಗಿಯೊಬ್ಬಳಿಗೆ ಜ್ಞಾನ ತಪ್ಪಿಸುವಲ್ಲಿ ಮಾರ್ಟನ್ ಒಮ್ಮೆ ವಿಫಲನಾದ. ಲೆಥಿಯಾನ್ ಸೇವಿಸಿದಾಕ್ಷಣ, ಕೆಮ್ಮು ಶುರುವಾಗಿ ಒದ್ದಾಡುತ್ತಿದ್ದಳೇ ಹೊರತು, ಎಷ್ಟೇ ಪ್ರಯತ್ನಪಟ್ಟರೂ ಪ್ರಜ್ಞಾಹೀನಳಾಗುತ್ತಿರಲಿಲ್ಲ. ಮಾರ್ಟನ್ ಸೋಲೊಪ್ಪಬೇಕಾಯಿತು. ಅವಮಾನದ ಜೊತೆಗೆ ಅವನ ಯೋಜನೆಗಳೆಲ್ಲಾ ತಲೆಕೆಳಗಾಗುವ ಪರಿಸ್ಥಿತಿ. ಪ್ರಜ್ಞೆ ತಪ್ಪಿಸಲು ವೈದ್ಯರಿಂದ ಬರುತ್ತಿದ್ದ ಕರೆಗಳೂ ನಿಂತುಹೋದವು.

ಪರಿಸ್ಥಿತಿಯಿಂದ ಬಚಾವಾಗಲು ಮಾರ್ಟನ್ ಮತ್ತೆ ಬಿಗೆಲೋ ಮೊರೆ ಹೋಗಬೇಕಾಯಿತು. ಮಾರ್ಟನ್ ಪ್ರಜ್ಞೆ ತಪ್ಪಿಸಲು ಬಳಸುತ್ತಿದ್ದ ರಸಾಯನಿಕದ ಗುಟ್ಟನ್ನು ಬಹಿರಂಗಪಡಿಸಲು ಇದೇ ಸರಿಯಾದ ಸಮಯವೆಂದರಿತ ಬಿಗೆಲೋ ಅದನ್ನು ಬಹಿರಂಗಪಡಿಸಬೇಕೆಂಬ ನಿಬಂಧನೆ ವಿಧಿಸಿದ. ಮಾರ್ಟನ್ ಒಪ್ಪಿಕೊಳ್ಳಲೇ ಬೇಕಾಯಿತು.

ಮತ್ತೆ ಅದೇ ರೋಗಿಗೆ ಮಾರ್ಟನ್ ಪ್ರಯೋಗ. ಹಿಂದಿನ ಅನುಭವದಿಂದ, ರೋಗಿಗೆ ಮೊದಲೇ "ಮತ್ತು" ಬರುವಂತೆ ಒಂದುನೂರು ತೊಟ್ಟು 'ಅಫೀಮ್' *(opium)*ನ ಕಷಾಯವನ್ನು ಕುಡಿಸಿದ್ದ. ಚಿಕಿತ್ಸಾ ಕೊಠಡಿಗೆ ಬರುವಷ್ಟರಲ್ಲಿ ಅವಳಿಗೆ ಅರೆನಿದ್ರಾವಸ್ಥೆ. ಮಾರ್ಟನ್ ಪ್ರಯೋಗ ಆರಂಭಿಸುವ ಮೊದಲೇ ತಾನು ಉಪಯೋಗಿಸುತ್ತಿದ್ದುದು ಸಲ್ಫ್ಯೂರಿಕ್ ಈಥರ್ ಎಂದು ಬಹಿರಂಗಪಡಿಸಿದ ! ರೋಗಿಯು ಮೊದಲೇ ಅರೆನಿದ್ರಾವಸ್ಥೆಯಲ್ಲಿದ್ದುದರಿಂದ ಸುಲಭದರಲ್ಲಿ ಪ್ರಜ್ಞಾಹೀನಳಾದಳು. ಹೇವರ್ಡ್ ಸಹಾ ರೋಗಿಗೆ "ಮತ್ತು" ಬರಲು ಅಫೀಮಿನ ಕಷಾಯ ಕುಡಿಸಿದ್ದನ್ನು ಬಹಿರಂಗಪಡಿಸಿದ. ಶಸ್ತ್ರಚಿಕಿತ್ಸೆಗಳ ಮುನ್ನ ಈಗ ನೀಡುವ "ಮುನ್ನೀಡಿಕೆಯ ಮದ್ದು" (*Premedication*) ಗೆ ಅದೇ ನಾಂದಿ. ವೆಲ್ಸ್‌ನ ಮೊದಲ ಬಹಿರಂಗ ಪ್ರದರ್ಶನದಲ್ಲಿ ರೋಗಿಗೆ ಮುನ್ನೀಡಿಕೆ ಮದ್ದನ್ನು ನೀಡಿದ್ದರೆ, ಅವನು ಆ ದಿನ ಅವಮಾನಕ್ಕೊಳಗಾಗ ಬೇಕಾಗಿರಲಿಲ್ಲ. ಅನೆಸ್ಥೀಸಿಯಾದ ಇತಿಹಾಸವೇ ಬದಲಾಗುತ್ತಿತ್ತು !

ಮಾರ್ಟನ್‌ನ ಗುರಿಸಾಧನೆಗೆ ತೊಡಕು ಇಷ್ಟಕ್ಕೇ ಪರಿಹಾರವಾಗಲಿಲ್ಲ. ಜಾಕ್ಸನ್ ಅಷ್ಟರಲ್ಲಿ ಮಾರ್ಟನ್‌ನ ಉದ್ದೇಶಗಳನ್ನು ಅರ್ಥಮಾಡಿಕೊಂಡಿದ್ದ. ಅವನ ಯೋಜನೆಗಳು ಇನ್ನು ಹೆಚ್ಚು ಫಲಪ್ರದವಾಗದಿರಲು ಅಡ್ಡಿಯುಂಟು ಮಾಡಲು ಹವಣಿಸಿದ. ಮಾರ್ಟನ್‌ನ ಹೆಸರು ಅಮೆರಿಕಾದಲ್ಲಿ ಹೆಚ್ಚು ಪ್ರಚಾರದಲ್ಲಿದ್ದುದರಿಂದ ಜಾಕ್ಸನ್ ತನಗೆ ಹೆಚ್ಚಿನ ಪ್ರಚಾರವಿರುವ ಯೂರೋಪಿನತ್ತ ಗಮನ ಹರಿಸಿದ.

ಪ್ಯಾರಿಸ್‌ನ ಅಕೆಡಿಮಿ ಆಫ್ ಸೈನ್ಸ್ ಮತ್ತು ಪ್ಯಾರಿಸ್ ಮೆಡಿಕಲ್ ಸೊಸೈಟಿಗಳಿಗೆ ಪತ್ರ ಬರೆದು ಅನೆಸ್ಥೀಸಿಯ ಪದ್ಧತಿಯನ್ನು ಎಲ್ಲರಿಗಿಂತ ಮೊದಲು ೧೮೪೨ ರಲ್ಲೇ ಕಂಡುಹಿಡಿದಿದ್ದಾಗಿ ಪ್ರತಿಪಾದಿಸಿದ. ಕ್ಲೋರಿನ್ ಸಂಶೋಧನೆಯ ಸಮಯದಲ್ಲಿ ಈಥರನ್ನು ಆಕಸ್ಮಾತ್ತಾಗಿ ಸೇವಿಸಿ ಮೂರ್ಛಿತನಾಗಿದ್ದು ನಂತರ ಅದರ ಗುಣಲಕ್ಷಣಗಳನ್ನು ಖಚಿತಪಡಿಸಿದ್ದ ನಂತೆ. ಮೆಕ್ಲೀನ್ ಹುಚ್ಚಾಸ್ಪತ್ರೆಯ ಕೆಲವು ರೋಗಿಗಳಿಗೂ ಅದನ್ನು ಪ್ರಯೋಗಿಸಿದ್ದನಂತೆ ! ಈ ಅನುಭವಗಳಿಂದಲೇ ಮಾರ್ಟನ್ ಮೆಸ್ಸಾ ಚೂಟಸ್ ಜನರಲ್ ಆಸ್ಪತ್ರೆಯಲ್ಲಿ ಈಥರನ್ನು ಪ್ರಯೋಗಿಸಲು ತಾನೇ ಕಳುಹಿಸಿದ್ದೆಂದು ಪತ್ರದಲ್ಲಿ ಬರೆದಿದ್ದ. ಜಾಕ್ಸನ್ ಹೆಸರು ಯೂರೋಪಿನ ವಿಜ್ಞಾನಿಗಳಿಗೆ ಮೊದಲೇ ಪರಿಚಯವಿದ್ದು ಕೆಲವರು ಅವನ ವಾದಗಳಿಗೆ ಪುರಸ್ಕಾರವಿತ್ತರು.

ಅಮೆರಿಕಾದಲ್ಲೂ ವಿಜ್ಞಾನ ಸಂಘಸಂಸ್ಥೆಗಳಲ್ಲಿ ಭಾಷಣ ಮತ್ತು ಲೇಖನಗಳಿಂದ ಅನೆಸ್ಥೀಸಿಯಾದ ಆದ್ಯತೆಯ ಬಗೆಗೆ ಪ್ರಚಾರ ಕೈಗೊಂಡನು.

ಜಾಕ್ಸನ್ ಹಿಂದಿನ ಒಪ್ಪಂದವನ್ನು ಮುರಿದು ಬಹಿರಂಗವಾಗಿ ವಾದ-ವಿವಾದಕ್ಕಿಳಿದುದು ಮಾರ್ಟನ್ನನನ್ನು ಕೆರಳಿಸಿತು. ಅವನು ೧೮೪೨ ರ ಮೊದಲೇ ಕೆಲವು ಬೆಕ್ಕು, ನಾಯಿಗಳಿಗೆ ಈಥರ್ ಪ್ರಯೋಗ ಮಾಡಿ ಅದರ ಪ್ರಜ್ಞೆ ತಪ್ಪಿಸುವ ಗುಣವನ್ನು ಕಂಡುಹಿಡಿದಿದ್ದಾಗಿ ವಾದಿಸಿದ.

ಬೋಸ್ಟನ್‌ನಲ್ಲಿ ಅನೆಸ್ಥೀಸಿಯಾ ಬಗೆಗೆ ವಾದ-ವಿವಾದ ನಡೆಯುವಾಗ ಹಾರ್ಟ್‌ಫೋರ್ಡ್‌ನಲ್ಲಿ ವೆಲ್ಸ್ ಮನಶ್ಶಾಂತಿಯನ್ನು ಕಳೆದುಕೊಂಡು ಮಂಕ ನಾಗಿದ್ದ. ಹೊರಗಿನ ವಿದ್ಯಮಾನಗಳ ಅರಿವೇ ಇಲ್ಲದೆ ಮಾರ್ಟನ್ ಮತ್ತು ಜಾಕ್ಸನ್‌ರ ಕಿತ್ತಾಟ ಅವನ ಗಮನಕ್ಕೆ ಬಹಳ ಕಾಲದವರೆಗೂ ಬಂದಿರಲಿಲ್ಲ.

ವಿಷಯ ತಿಳಿದಮೇಲೆ ಅವರಿಬ್ಬರ ವರ್ತನೆ ಇನ್ನೂ ಜಿಗುಪ್ಸೆಯನ್ನುಂಟುಮಾಡಿತು. ವಾಸ್ತವವಾಗಿ ನೈಟ್ರಸ್ ಆಕ್ಸೈಡನ್ನು ಜ್ಞಾನತಪ್ಪಿಸುವುದರಲ್ಲಿ ಬಳಸಿದವರಲ್ಲಿ ಅವನೇ ಮೊದಲಿಗನಾದರೂ, ಅದರ ಆದ್ಯತೆಗೆ ಹೋರಾಡುವುದಾಗಲೀ, ಧನ ಸಂಪಾದನೆಗಾಗಿ ದುರುಪಯೋಗಪಡಿಸಿಕೊಳ್ಳುವ ಹಂಬಲವಾಗಲೀ ಅವನಿಗಿರಲಿಲ್ಲ. ಆದರೂ ಜನತೆಗೆ ನಿಜಸ್ಥಿತಿಯ ಪರಿಚಯ ಮಾಡಲು ಹಾರ್ಟ್‌ಫೋರ್ಡ್ ಮತ್ತು ಬೋಸ್ಟನ್‌ನ ವೈದ್ಯಕೀಯ ಪತ್ರಿಕೆಗಳಿಗೆ ಕಾಗದ ಬರೆದು ಅವನ ಅನುಭವವನ್ನೂ ವಿವರಿಸಿದ. ಸೌಮ್ಯ ರೀತಿಯ ಅವನ ಬರವಣಿಗೆ ಯಾರ ಮೇಲೂ ಪರಿಣಾಮ ಬೀರಲಿಲ್ಲ.

**ಯೂರೋಪ್ ಪ್ರಯಾಣ :**

ವೆಲ್ಸ್‌ನ ಮಾನಸಿಕ ಮತ್ತು ದೈಹಿಕ ಆರೋಗ್ಯ ದಿನದಿನಕ್ಕೆ ಹದಗೆಟ್ಟು ವೃತ್ತಿಯೂ ಹೆಚ್ಚಿನ ಲಾಭದಾಯಕವಾಗುತ್ತಿರಲಿಲ್ಲ. ಸಾಮಾನ್ಯ ಜೀವನ ನಡೆಸುವುದೂ ದುಸ್ತರವಾಯಿತು. ದಂತವೈದ್ಯ ವೃತ್ತಿಯನ್ನೇ ನಿಲ್ಲಿಸಿ, ಯೂರೋಪಿನಲ್ಲಿ ಕರಕುಶಲ ಸಾಮಗ್ರಿಗಳ ವಿತರಣೆಯ ಉದ್ಯೋಗವನ್ನವಲಂಬಿಸುವ ವಿಚಿತ್ರ ನಿರ್ಧಾರಕ್ಕೆ ಬಂದ !

ಪ್ಯಾರಿಸ್‌ಗೆ ತಲ್ಪಿದನಂತರ, ಅನೆಸ್ಥೀಸಿಯಾ ಬಗೆಗೆ ವೆಲ್ಸ್‌ನ ಲೇಖನಗಳ ಪರಿಚಯವಿದ್ದ ಬ್ರೂಸ್ಟರ್ ಎಂಬ ದಂತವೈದ್ಯನ ಪರಿಚಯ ಆಕಸ್ಮಿಕವಾಗಿ ಆಯಿತು. ಪ್ಯಾರಿಸ್‌ನ ವೈಜ್ಞಾನಿಕ ಮತ್ತು ವೈದ್ಯಕೀಯ ವಲಯದ ಪ್ರತಿಷ್ಠರಿಗೆ ಬ್ರೂಸ್ಟರ್ ಅವನನ್ನು ಪರಿಚಯಿಸಿದ. ಹಲವಾರು ಸಂಘಸಂಸ್ಥೆಗಳಲ್ಲಿ ಅವನ ಭಾಷಣಗಳಾದುವು. ವೈದ್ಯಕೀಯ ಪತ್ರಿಕೆಗಳಲ್ಲಿ ಅವನ ಲೇಖನ ಪ್ರಕಟವಾದುವು. ವೆಲ್ಸ್‌ನ ಪ್ರತಿಷ್ಠೆ ಮೇಲೇರಿತು. ಅಲ್ಲಿ ಅವನೊಬ್ಬ ಗೌರವಾನ್ವಿತ ಅತಿಥಿಯಾದ. ಅವನ ಸಂಶೋಧನೆಯನ್ನು ವರಿಷ್ಠರು ಮುಗ್ಧಕಂಠದಿಂದ ಹೊಗಳಿದರು.

ಪ್ಯಾರಿಸ್ಸಿನಲ್ಲಿ ದೊರೆತ ಪುರಸ್ಕಾರದಿಂದ ಪುಳಕಿತನಾದ ವೆಲ್ಸ್ ಕರಕುಶಲ ಸಾಮಗ್ರಿಗಳ ವ್ಯಾಪಾರ ಕೈಬಿಟ್ಟು ಸ್ವದೇಶಕ್ಕೆ ಹಿಂದಿರುಗಿದ. ಅಷ್ಟರಲ್ಲೇ ಅಮೆರಿಕದಲ್ಲೂ ಅವನ ಬಗ್ಗೆ ಒಳ್ಳೆಯ ಅಭಿಪ್ರಾಯ ಮೂಡಿ

ದಂತಿತ್ತು. ಮಾರ್ಟನ್ ಮತ್ತು ಜಾಕ್ಸನ್ ತಮ್ಮಿಬ್ಬರ ಕಿತ್ತಾಟದ ಜೊತೆಗೆ ವೆಲ್ಸ್‌ನ ಮೇಲೂ ಕೆಂಡಕಾರುತ್ತಲೇ ಇದ್ದರು.

ಅಮೆರಿಕೆಗೆ ಹಿಂದಿರುಗಿದ ವೆಲ್ಸ್‌ಗೆ ಇನ್ನೊಂದು ವಿಚಿತ್ರ ಯೋಜನೆ ಬೆನ್ನು ಹತ್ತಿತು. ಅನೆಸ್ಥೀಸಿಯಾ ಬಗೆಗೆ ನ್ಯೂಯಾರ್ಕ್ ನಗರದಲ್ಲಿ ತರಬೇತಿ ನೀಡುವ ಗುರಿ, ಜೊತೆಗೆ ಯೂರೋಪಿನಲ್ಲಿದ್ದ ಸಮಯದಲ್ಲಿ ಬೆಳಕಿಗೆ ಬರುತ್ತಿದ್ದ ಕ್ಲೋರೋಫಾರಂ ಬಗೆಗೆ ಸಂಶೋಧನೆ ಕೈಗೊಳ್ಳುವುದು! ಅಲ್ಲೊಂದು ಕೊಠಡಿಯನ್ನು ಬಾಡಿಗೆಗೆ ಹಿಡಿದು ಕೆಲವರಿಗೆ ಪಾಠ ಹೇಳಿದ. ಕ್ಲೋರೋಫಾರಂ ಸಂಶೋಧನೆಯ ಅಂಗವಾಗಿ ಅದನ್ನು ಸ್ವತಃ ತಾನೇ ಉಪ ಯೋಗಿಸಿ ಪರಿಣಾಮವನ್ನು ಅಭ್ಯಸಿಸುತ್ತಲೂ ಇದ್ದ. ಬರುಬರುತ್ತಾ ಅದೊಂದು ಅಭ್ಯಾಸವಾಗಿ ಪರಿಣಮಿಸಿತು. ಸದಾ ಅದರ ಅಮಲಿನಲ್ಲೇ ತಿರುಗಾಡುತ್ತಿದ್ದ.

ಅಮಲಿನಲ್ಲಿ ಬೀದಿಯಲ್ಲಿ ತಿರುಗಾಡುತ್ತಿದ್ದಾಗ ನ್ಯೂಯಾರ್ಕಿನ ಪುಂಡ ನೊಬ್ಬ ಅವನ ಬೆನ್ನು ಹತ್ತಿ ಕೊಠಡಿಗೆ ಬಂದ. ಕೊಠಡಿಯಲ್ಲಿ ವೆಲ್ಸ್ ತನ್ನ ಸಂಶೋಧನೆಗಾಗಿ ಇಟ್ಟಿದ್ದ ಆಸಿಡ್ ಶೀಸೆಯೊಂದನ್ನು ಒತ್ತಾಯಿಸಿ ತೆಗೆದು ಕೊಂಡು, ಅವನನ್ನೂ ಕರೆದುಕೊಂಡು ಬೀದಿಗಿಳಿದ. ಅದನ್ನು ಅವನಿಗೆ ಅವಮಾನಪಡಿಸಿದ ಪ್ರೇಯಸಿಯ ಮೇಲೆ ಚೆಲ್ಲುವುದಾಗಿ ಅವಳ ಹತ್ತಿರ ಹೋದರೂ, ಮನಸ್ಸು ಬದಲಾಯಿಸಿ ಮತ್ತೆ ವೆಲ್ಸ್‌ನ ಕೊಠಡಿಯಲ್ಲೇ ತಂದಿಟ್ಟ. ಮಾನಸಿಕ ಭ್ರಾಂತಿಯಲ್ಲಿದ್ದ ವೆಲ್ಸ್‌ಗೆ ಅವನ ರೀತಿ ಅರ್ಥವಾಗ ಲಿಲ್ಲ.

ಮರುದಿನ ಕ್ಲೋರೋಫಾರಂ ಸೇವಿಸಿದ ಅಮಲಿನಲ್ಲಿ ಅದೇ ಆಸಿಡ್‌ನ್ನು ರಸ್ತೆಯಲ್ಲಿ ಪೋಗುತ್ತಿದ್ದ ಅಪರಿಚಿತ ಮಹಿಳೆಯರಿಬ್ಬರ ಮೇಲೆ ಚೆಲ್ಲಿದ! ಸುತ್ತಮುತ್ತಲಿದ್ದ ಜನ ಅವನನ್ನು ಹಿಡಿದು ಪೊಲೀಸರಿಗೊಪ್ಪಿ ಸಿದರು.

ಆ ದಿನ ಸಾಯಂಕಾಲವೇ ವೆಲ್ಸ್ ನ್ಯಾಯಾಲಯದ ಕಟಕಟೆಯಲ್ಲಿ ಹುಚ್ಚನಾಗಿ ನಿಲ್ಲುವ ಪ್ರಸಂಗ. ನ್ಯಾಯಾಧೀಶರು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ನೀಡದಷ್ಟು ಬುದ್ಧಿಭ್ರಮಣೆ. ಹೇಗೋ ಮಾಡಿ ಅವನ ಪರಿಚಯ ಹೇಳಿದ. ಪುಂಡನ ಸಹವಾಸ, ಕ್ಲೋರೋಫಾರಂ ಸೇವನೆಗಳ

ಬಗೆಗೆ ಅಲ್ಪಸ್ವಲ್ಪ ವಿವರಣೆ ನೀಡಲು ಸಾಧ್ಯವಾಯಿತು. ತನ್ನ ಪರಿಸ್ಥಿತಿಗೆ ಮರುಗಿ ಬಿಕ್ಕಿ ಬಿಕ್ಕಿ ಅತ್ತ. ಅವನ ಸ್ಥಾನಮಾನ ಅರಿತ ನ್ಯಾಯಾಧೀಶರು ಆ ದಿನ ವಿಚಾರಣೆ ತಡೆಹಿಡಿದು, ಸೆರೆಮನೆಯಲ್ಲಿ ಪ್ರತ್ಯೇಕ ಕೊಠಡಿಯಲ್ಲಿರಿಸಿ ಸರಿಯಾಗಿ ಉಪಚರಿಸುವಂತೆ ಆಜ್ಞಾಪಿಸಿದರು.

ಸೆರೆಮನೆಯ ಕೊಠಡಿಯಲ್ಲಿ ನ್ಯಾಯಾಧೀಶರ ಅಪ್ಪಣೆಯಂತೆ ಅವನ ಕೊಠಡಿಯಲ್ಲಿದ್ದ ಸಾಮಗ್ರಿಗಳನ್ನು ತಂದಿಟ್ಟುಕೊಳ್ಳುವ ಏರ್ಪಾಡು ಮಾಡ ಲಾಗಿತ್ತು. ಮರುದಿನ ಸೆರೆಮನೆಯ ಬಾಗಿಲು ತೆರೆದಾಗಿನ ದೃಶ್ಯ—(ಜನವರಿ ೧೪, ೧೮೪೮) "ವೆಲ್ಸ್ ಮಂಚದ ಮೇಲೆ ಮುಂದೆ ಬಾಗಿ ಕುಳಿತಿದ್ದಾನೆ. ಮುಖ ಶಿರಸ್ತ್ರಾಣದಿಂದ ಮುಚ್ಚಿದೆ, ಕೊಠಡಿಯಲ್ಲಿ ರಕ್ತ ಹರಿದು ನಿಂತಿದೆ. ಪಕ್ಕದಲ್ಲಿ ಕ್ಲೋರೋಫಾರಂ ಶೀಸೆ, ಮೇಲೆತ್ತಿದ ಬಲಗೈನಲ್ಲಿ ಚಾಕು, ಶಿರಸ್ತ್ರಾಣ ತೆಗೆದರೆ ಬಾಯಿ ಮತ್ತು ಮೂಗಿನ ಮೇಲೆ ಕ್ಲೋರೋಫಾರಂನಿಂದ ಒದ್ದೆಯಾದ ಎರಡು ಕರವಸ್ತ್ರಗಳು, ಬಲತೊಡೆಯ ಮುಂಭಾಗದಲ್ಲಿ ಸೀಳಿದ ಗಾಯ. ಹಾಸಿಗೆಯ ಇನ್ನೊಂದು ಪಕ್ಕದಲ್ಲಿ ಅವನೇ ಬರೆದಿಟ್ಟ ಎರಡು ಪತ್ರಗಳು".

ಮೊದಲ ಪತ್ರ : ನ್ಯಾಯಾಲಯದಲ್ಲಿ ಪೂರ್ತಿಮಾಡಲಾಗದ ಹೇಳಿಕೆ— ಕ್ಲೋರೋಫಾರಂ ಸೇವಿಸಿದ ಅಮಲಿನಿಂದ ಆಸಿಡ್ ಶೀಸೆಯೊಂದಿಗೆ ಬೀದಿಗೆ ಓಡಿದ್ದು, ಏನು ಮಾಡುತ್ತಿದ್ದೇನೆಂಬುದರ ಅರಿವಿಲ್ಲದೆ ಸಿಕ್ಕಿದವರ ಮೇಲೆ ಚೆಲ್ಲಿದ್ದು. ತನ್ನ ಅಸಭ್ಯವರ್ತನೆಯ ಬಗೆಗೆ ಸಾರ್ವಜನಿಕರಲ್ಲಿ ಕ್ಷಮಾ ಯಾಚನೆ. ತನ್ನ ಮಿದುಳಿಗೆ ಬೆಂಕಿ ಬಿದ್ದಿದೆಯೆಂದು ಹೇಳಿ ಪತ್ರ ಪರಿಸಮಾಪ್ತಿ !

ಇನ್ನೊಂದು ಪತ್ರ : ಪತ್ನಿ ಲಿಜ್‌ಳಿಗೆ—ವೈಜ್ಞಾನಿಕ ವಲಯದಲ್ಲಿ ಏರುತ್ತಿದ್ದ ಅವನ ಸ್ಥಾನಮಾನ, ಆದರೆ ಆ ಜೀವನದಲ್ಲಿ ಆಗುತ್ತಿದ್ದ ನಿರಾಶೆ, ಜಿಗುಪ್ಸೆಗಳ ವಿವರಣೆ, ಕೀಳುಮಟ್ಟಕ್ಕಿಳಿದು ಅವಳಿಗೂ, ಕುಟುಂಬದವ ರಿಗೂ ಅವಮಾನವಾಗುವಂತೆ ನಡೆದುಕೊಂಡಿರುವುದಕ್ಕೆ ಕ್ಷಮಾಪಣೆ. ಅವಳನ್ನು ಮತ್ತು ಪುಟ್ಟಕಂದನನ್ನು ಅನಾಥರನ್ನಾಗಿ ಬಿಟ್ಟುಹೋಗುತ್ತಿರು ವುದಕ್ಕೆ ಪಶ್ಚಾತ್ತಾಪ.

ಮುಂದಿನ ಒಂದು ವಾರದಲ್ಲಿ ಪ್ಯಾರಿಸ್ ಹಿತೈಷಿ ಬ್ರೂಸ್ಟರ್ ಕಳುಹಿಸಿದ ಪತ್ರದ ಸಾರಾಂಶ—

"ಗೆಳೆಯಾ, ಪ್ಯಾರಿಸ್ ಮೆಡಿಕಲ್ ಸೊಸೈಟಿಯು ಮೊನ್ನೆಯ ಅಧಿವೇಶನದಲ್ಲಿ ಅನೆಸ್ಥೀಸಿಯಾವನ್ನು ಮೊಟ್ಟಮೊದಲು ಜಾರಿಗೆ ತಂದ ಗೌರವ ನಿನಗೇ ಸಲ್ಲತಕ್ಕದ್ದೆಂದು ತೀರ್ಮಾನಿಸಿದ್ದಾರೆ. ಮಾನವಜನಾಂಗ ನಿನಗೆ ಚಿರಋಣಿ. ಸೊಸೈಟಿಯ ಅಧಿಕೃತ ದೃಢೀಕರಣ ಪತ್ರ ಸದ್ಯದಲ್ಲೇ ನಿನ್ನ ಕೈಸೇರಲಿದೆ. ಅದರಿಂದ ನಿನಗಿರುವ ಅಡಚಣೆಗಳು ಮಾಯವಾಗಲಿವೆ".

ಈ ಪತ್ರ ಅಮೆರಿಕಾವನ್ನು ತಲುಪುವುದರೊಳಗೆ ಹೊರೇಸ್‌ವೆಲ್ಸ್ ಇಹಲೋಕ ತ್ಯಜಿಸಿದ್ದ.

**ಈಥರ್ ಸಮರ :**

ವೆಲ್ಸ್‌ನ ಆತ್ಮಹತ್ಯೆಯಿಂದ ಮಾರ್ಟನ್ ಮತ್ತು ಜಾಕ್ಸನ್, ಅನೆಸ್ಥೀಸಿಯಾ ಕಂಡುಹಿಡಿದ ಆದ್ಯತೆಯ ವಾದ–ವಿವಾದದಲ್ಲಿ ನೇರವಾಗಿ ಸೆಣಸುವಂತಾಯಿತು. ಮುಂದಿನ ಹದಿನೈದುವರ್ಷ ಅಮೆರಿಕಾದಲ್ಲಿ "ಈಥರ್ ಸಮರ" ಅವರಿಬ್ಬರ ನಡುವೆ ಅವ್ಯಾಹತವಾಗಿ ನಡೆಯಿತು. ವಕೀಲರು, ಪುಡಾರಿಗಳು, ಪತ್ರಕರ್ತರುಗಳ ಗುಂಪುಗಳು ಎರಡೂ ಕಡೆಯವರ ಪರ–ವಿರೋಧವಾಗಿ ಸೆಣಸಾಡಿದರು. ಇಬ್ಬರೂ ಸಾವಿರಾರು ಡಾಲರು ಗಳನ್ನು ಖರ್ಚುಮಾಡಿ, ಆರ್ಥಿಕವಾಗಿ ಜರ್ಝರಿತರಾದರು.

ಅನೆಸ್ಥೀಸಿಯಾ ಸಂಶೋಧನೆಗೆ ತಾನು ವಿಪರೀತ ಖರ್ಚುಮಾಡಿ ನಷ್ಟ ಅನುಭವಿಸಿರುವುದಾಗಿ ಮಾರ್ಟನ್ ಅಮೆರಿಕಾದ ಕಾಂಗ್ರೆಸ್‌ಗೆ ದೂರು ಕೊಟ್ಟ. ಸಾರ್ವಜನಿಕ ನೆಮ್ಮದಿಗಾಗಿ ಅವನು ಖರ್ಚುಮಾಡಿದ ಒಂದುಲಕ್ಷ ಡಾಲರನ್ನು ಕಾಂಗ್ರೆಸ್ ತುಂಬಿಕೊಡಬೇಕೆಂಬುದು ಅವನ ಮನವಿ.

ಈ ದಿಸೆಯಲ್ಲಿ ಜಾಕ್ಸನ್ ಹಿಂದೆ ಬೀಳದೆ ಈಥರನ್ನು ತಾನೇ ಕಂಡು ಹಿಡಿದು, ಮಾರ್ಟನ್‌ಗೆ ತಿಳಿಸಿದ್ದರಿಂದ ಆ ಹಣವೆಲ್ಲ ತನಗೇ ಸಲ್ಲಬೇಕೆಂದು ಕಾಂಗ್ರೆಸ್ಸನ್ನು ಪ್ರಾರ್ಥಿಸಿದ. ಸೆನೆಟರುಗಳನ್ನು ತಮ್ಮ ಕಡೆ ಒಲಿಸಿಕೊಳ್ಳಲು ಅವರಿಬ್ಬರೂ ಮತ್ತೆ ಅಪಾರ ಹಣ ಖರ್ಚು ಮಾಡಿದರು. ಇಬ್ಬರಿಗೂ

ಸಾಕಷ್ಟು ಬೆಂಬಲವಿದ್ದು, ವರ್ಷಗಟ್ಟಲೇ ಕಾಂಗ್ರೆಸ್ ಯಾವ ಇತ್ಯರ್ಥಕ್ಕೂ ಬರಲು ಸಾಧ್ಯವಾಗಲಿಲ್ಲ.

ದಿವಂಗತ ವೆಲ್ಸ್‌ನ ಕ್ಷೇತ್ರದ ಸೆನೆಟರ್ ಟ್ರೂಮನ್‌ಸ್ಮಿತ್ ೧೮೫೨ ರ ಸಮಯದಲ್ಲಿ ಕಣಕ್ಕಿಳಿದು, ವೆಲ್ಸ್‌ನೇ ಮೊಟ್ಟಮೊದಲು ಹಾರ್ಟ್‌ಫೋರ್ಡ್‌ನಲ್ಲಿ ನೈಟ್ರಸ್ ಆಕ್ಸೈಡ್ ಅನಿಲದಿಂದ ಅನೆಸ್ಥೀಸಿಯಾ ಜಾರಿಗೆ ತಂದವನಾದ್ದರಿಂದ ಗೌರವಧನ ನಿರ್ಗತಿಕರಾದ ಅವನ ಕುಟುಂಬಕ್ಕೆ ಸಲ್ಲಬೇಕೆಂಬ ವಾದವನ್ನು ಕಾಂಗ್ರೆಸ್‌ನ ಮುಂದಿಟ್ಟ.

ಮಾರ್ಟನ್ ಈ ತಿರುವನ್ನು ನಿಷ್ಫಲಗೊಳಿಸಲು ವೆಲ್ಸ್‌ನ ಸಹಾಯಕನಾದ ರಿಗ್ಸ್ ಮತ್ತು ಅವನ ಪತ್ನಿ ಲಿಜ್‌ಳಿಗೂ ಕೆಲವು ಆಶೆ ತೋರಿಸಿ, ವೆಲ್ಸ್ ವಿರುದ್ಧ ಕಾಂಗ್ರೆಸ್‌ನಲ್ಲಿ ಸಾಕ್ಷ್ಯ ಹೇಳಿಸಲು ಪ್ರಯತ್ನಿಸಿದ! ಅದು ಫಲಿಸದೆ, ಸಾಮ್ಯುಯಲ್ ಕೂಲಿಯನ್ನು ಬಲೆಗೆ ಹಾಕಿಕೊಂಡು ಸಾಕ್ಷ್ಯ ಹೇಳಿಸಿದರೂ ಕಾಂಗ್ರೆಸ್ ಅದನ್ನು ಒಪ್ಪಲಿಲ್ಲ.

ಮೇಲಿಂದ ಮೇಲೆ ತನಗೆ ಅಪಜಯವಾಗುತ್ತಿದ್ದರೂ ಮಾರ್ಟನ್ ತನ್ನ ಹಕ್ಕನ್ನು ಬಿಟ್ಟುಕೊಡಲು ತಯಾರಿರಲಿಲ್ಲ. ೧೮೬೩ರಲ್ಲಿ ಇನ್ನಷ್ಟು ಸೆನೆಟರುಗಳ ಬೆಂಬಲ ಪಡೆದು ಎರಡು ಲಕ್ಷ ಡಾಲರುಗಳ ಪರಿಹಾರಕ್ಕೆ ಅರ್ಜಿ ಸಲ್ಲಿಸಿದ. ಸೆನೆಟರ್ ಟ್ರೂಮನ್ ಸ್ಮಿತ್ ಇನ್ನೂ ಎಚ್ಚರವಾಗಿದ್ದ. ಅವನ ಜತೆ ಜಾರ್ಜಿಯಾದ ಸೆನೆಟರ್ ಡಾಸನ್ ಹೊಸ ಸಮಾಚಾರವೊಂದನ್ನು ಬಹಿರಂಗಪಡಿಸಿದ. ಅನೆಸ್ಥೀಸಿಯಾವನ್ನು ವೆಲ್ಸ್, ಮಾರ್ಟನ್ ಮತ್ತು ಜಾಕ್ಸನ್‌ರು ಬಳಸುವ ಮೊದಲೇ ತನ್ನ ಕ್ಷೇತ್ರದ ಕ್ರಾಫರ್ಡ್‌ಲಾಂಗ್ ಎಂಬ ವೈದ್ಯ ಈಥರನ್ನು ಬಳಸುತ್ತಿದ್ದನೆಂದು ದಾಖಲೆ ಸಹಿತ ಪ್ರತಿಪಾದಿಸಿ, ಇನ್ನೊಂದು ಹೊಸ ತಿರುವು ಮಾಡಿದ.

ಈ ಎಲ್ಲಾ ವಾದ–ವಿವಾದ ಮತ್ತು ಮಾರ್ಟನ್ ಸ್ವಂತ ಹಿತಕ್ಕಾಗಿ ಕೀಳುಮಟ್ಟದಲ್ಲಿ ನಡೆಸುತ್ತಿದ್ದ ಪ್ರಚಾರಗಳಿಂದ ಬೇಸತ್ತ ಕಾಂಗ್ರೆಸ್ ಅಂತಿಮವಾಗಿ ಅನೆಸ್ಥೀಸಿಯಾ ಪರ ಗೌರವಧನದ ಮಸೂದೆಯನ್ನು ತಳ್ಳಿ ಹಾಕಿತು!

ಹತಾಶನಾದ ಮಾರ್ಟನ್‌ಗೆ ಇನ್ನು ಯಾವ ಆಧಾರಗಳೂ ಇರಲಿಲ್ಲ. ಗಳಿಸಿದ ಸಂಪಾದನೆಯೆಲ್ಲಾ ಖರ್ಚಾಗಿದ್ದಲ್ಲದೆ ವಿಪರೀತ ಸಾಲವಾಗಿತ್ತು.

ಸಾಲಗಾರರ ತಗಾದೆ ಹೆಚ್ಚಿತು. ಬೆಂಬಲಿಗರು ದೂರ ಸರಿದರು. ಬುದ್ಧಿ ಭ್ರಮಣೆಯಾಯಿತು, ಮಂಕು ಕವಿಯಿತು, ಹುಚ್ಚನಾಗಿ ತಿರುಗಾಡಿದ. ೧೯೬೮ ರ ಜುಲೈ ೧೮ ರಂದು ವಿಪರೀತ ಜ್ವರವಿದ್ದರೂ ಕುದುರೆಗಾಡಿಯಲ್ಲಿ ನ್ಯೂಯಾರ್ಕಿಗೆ ಧಾವಿಸಿದ. ಅಲ್ಲಿಂದ ಮತ್ತೆ ಊರಿಗೆ ಹಿಂತಿರುಗುವಾಗ ಗಾಡಿಯಿಂದ ಹೊರಗೆ ಹಾರಿ ಪ್ರಜ್ಞೆ ತಪ್ಪಿತು. ಕೆಲವು ತಾಸುಗಳಲ್ಲೇ ಅಸು ನೀಗಿದ.

ಜಾಕ್ಸನ್ ಇನ್ನೂ ಕೆಲವು ವರ್ಷ ಬದುಕಿದ್ದರೂ ಕ್ರಮೇಣ ಅವನಿಗೂ ಹುಚ್ಚು ಹಿಡಿಯಿತು. ಏಳು ವರ್ಷ ಮೆಕ್ಲೀನ್ ಹುಚ್ಚಾಸ್ಪತ್ರೆಯಲ್ಲಿದ್ದೇ ೧೮೮೦ ರ ಆಗಸ್ಟ್ ೨೮ ರಲ್ಲಿ ಮರಣ ಹೊಂದಿದ.

**ಕ್ರಾಫರ್ಡ್ ಲಾಂಗ್ :**

ಹಾರ್ಟ್‌ಫೋರ್ಡ್, ಬೋಸ್ಟನ್, ನ್ಯೂಯಾರ್ಕ್ ಹಾಗೂ ಅಮೆರಿಕಾದ ಕಾಂಗ್ರೆಸ್‌ನಲ್ಲಿ ಅನೆಸ್ಥೀಸಿಯ ಬಗೆಗೆ ವಾದ–ವಿವಾದ ತಕರಾರುಗಳು ಸುಮಾರು ನಾಲ್ಕು ದಶಕಗಳಿಂದಲೂ ನಡೆಯುತ್ತಲಿದ್ದರೂ, ಅದನ್ನು ಅವರೆಲ್ಲರಿಗಿಂತಲೂ ಮೊದಲೇ ಜಾರಿಗೆ ತಂದಿದ್ದ ಜಾರ್ಜಿಯಾ ಪ್ರಾಂತ್ಯದ ಜಫರ್ಸನ್ ಎಂಬ ಹಳ್ಳಿ ವೈದ್ಯ ಕ್ರಾಫರ್ಡ್ ಲಾಂಗ್‌ಗೆ ಈ ಬಗೆಗಿನ ಅರಿವೇ ಇರಲಿಲ್ಲ.

ಕ್ರಾಫರ್ಡ್‌ಲಾಂಗ್ ಹಳ್ಳಿಯ ವೈದ್ಯನಾದರೂ ಸಾಕಷ್ಟು ಕಾರ್ಯ ದಕ್ಷತೆಯಿಂದ ಹೆಸರು ಗಳಿಸಿದ್ದನಲ್ಲದೆ, ಹಲವಾರು ತರುಣರಿಗೆ ತರಬೇತಿ ಯನ್ನೂ ನೀಡುತ್ತಿದ್ದ. ಒಂದು ಸಾರಿ ಅವನ ವಿದ್ಯಾರ್ಥಿಗಳು ಆಗ ಪ್ರಚಾರದಲ್ಲಿದ್ದ "ನಗಿಸುವ ಅನಿಲ"ದ ಮೋಜಿನ ಕೂಟವನ್ನು ಏರ್ಪಡಿಸು ವಂತೆ ದುಂಬಾಲು ಬಿದ್ದರು. ಅವನಲ್ಲಿ ನೈಟ್ರಸ್‌ಆಕ್ಸೈಡ್ ಇರದಿದ್ದುದ ರಿಂದ ಹಿಂದೆ ಯಾವುದೋ ಪ್ರಯೋಗಕ್ಕಾಗಿ ತಂದಿರಿಸಿದ್ದ ಸಲ್ಫ್ಯೂರಿಕ್ ಈಥರ್‌ಗೂ ಅಂತಹ ಮೋಜುಬರಿಸುವ ಗುಣವಿರುವುದನ್ನು ಸ್ವತಃ ಅನು ಭವಿಸಿದ್ದ ಲಾಂಗ್ ಅದನ್ನೇ ಕೂಟದಲ್ಲಿ ಸೇವಿಸುವಂತೆ ಸೂಚಿಸಿದ.

ವಿದ್ಯಾರ್ಥಿಗಳು ಸಲ್ಫ್ಯೂರಿಕ್ ಈಥರನ್ನೇ ಸೇವಿಸಿ ನಕ್ಕುನಲಿದು ಕುಣಿ ದಾಡಿದರು. ಕೆಲವರಿಗೆ ಮೂರ್ಛೆ ಬಂದಂತಾಗಿ ಬಿದ್ದು ಗಾಯಗಳಾಗಿ ರಕ್ತ

ನೋರುತ್ತಿದ್ದರೂ ನೋವಿನ ಬಗ್ಗೆ ಚಕಾರ ಎತ್ತಲಿಲ್ಲ ! ಈ ಘಟನೆ ಶಸ್ತ್ರ ಚಿಕಿತ್ಸೆ ಸಮಯದಲ್ಲಿ ನೋವಾಗದಿರಲು ಈಥರನ್ನೇಕೆ ಬಳಸಬಾರದೆಂಬುದರ ಬಗೆಗೆ ಲಾಂಗ್ ಯೋಚಿಸುವಂತಾಯಿತು.

**೧೮೪೨, ಮಾರ್ಚ್ ೩೦ :**

ಕತ್ತಿನ ಹಿಂಭಾಗದ ಎರಡು ಗಡ್ಡೆಗಳ ನೋವಿನಿಂದ ನರಳುತ್ತಿದ್ದ ಜೇಮ್ಸ್ ವೆನಬಲ್ ಆ ದಿನ ಲಾಂಗ್‌ನ ಚಿಕಿತ್ಸಾಲಯಕ್ಕೆ ಬಂದು ಅವು ಗಳನ್ನು ನೋವಾಗದೆ ತೆಗೆಯಲು ಸಾಧ್ಯವೇ ಎಂದು ವಿನಂತಿಸಿದ. ಈಥರ್‌ನ್ನು ಪ್ರಯೋಗಿಸುವ ಸದಾವಕಾಶಕ್ಕಾಗಿ ಕಾಯುತ್ತಿದ್ದ ಲಾಂಗ್ ವಿಷಯವನ್ನು ಅವನೊಂದಿಗೆ ಪ್ರಸ್ತಾಪಿಸಿದಾಗ ಮೊದಲೇ ಅತಿಯಾದ ನೋವಿನಿಂದ ಬಳಲುತ್ತಿದ್ದ ವೆನಬಲ್ ತಕ್ಷಣ ಸಮ್ಮತಿಸಿದ.

ವಿದ್ಯಾರ್ಥಿಗಳು ವೆನಬಲ್‌ಗೆ ಈಥರ್ ಸೇವನೆ ಮಾಡಿಸಿದರು. ವೆನಬಲ್ ಸ್ವಲ್ಪಸಮಯ ಒದ್ದಾಡಿ ಮೂರ್ಛಿತನಾದ. ಲಾಂಗ್ ಅವನ ಎರಡೂ ಗಡ್ಡೆಗಳನ್ನು ಕೊಯ್ದು ಕತ್ತರಿಸಿ ತೆಗೆದರೂ ವೆನಬಲ್ ಅಲುಗಾಡ ಲಿಲ್ಲ. ಎಚ್ಚರವಾದ ನಂತರ ವೆನಬಲ್ ನೋವಾಗದೇ ಚಿಕಿತ್ಸೆ ಮಾಡಿದ್ದಕ್ಕೆ ತನ್ನ ಅಚ್ಚರಿ ಹಾಗೂ ಹರ್ಷವನ್ನು ವ್ಯಕ್ತಪಡಿಸಿದ. ಲಾಂಗ್‌ಗೆ ಈ ಪ್ರಕರಣ ಸಂತೋಷವನ್ನುಂಟುಮಾಡಿದರೂ ಹೆಚ್ಚಿನ ಪ್ರಚಾರಕ್ಕಿಳಿಯಲಿಲ್ಲ. ಲೆಕ್ಕದ ಪುಸ್ತಕದಲ್ಲಿ ಆ ದಿನ ಬರೆದ, "೩೦, ಮಾರ್ಚ್ ೧೮೪೨, ಜೇಮ್ಸ್ ವೆನಬಲ್, ಈಥರ್ ಪ್ರಯೋಗ, ಕತ್ತಿನಗಡ್ಡೆ ತೆಗೆದದ್ದಕ್ಕೆ—ಡಾಲರ್ ೩.೦೦" ದಾಖಲೆಯೊಂದೇ ಈ ಬಗ್ಗೆ ಪ್ರಮುಖ ಸಾಕ್ಷಿ !

ಲಾಂಗ್ ಮುಂದೆ ತನ್ನ ನಿತ್ಯದ ವೈದ್ಯವೃತ್ತಿಯಲ್ಲಿ ಸಮಯ ದೊರೆ ತಾಗಲೆಲ್ಲಾ ಈಥರ್‌ನ್ನು ಯಶಸ್ವಿಯಾಗಿ ಬಳಸುತ್ತಿದ್ದರೂ ಆ ಬಗ್ಗೆ ಯಾರ ಹತ್ತಿರವೂ ಪ್ರಸ್ತಾಪ ಮಾಡಲಿಲ್ಲ. ಪಟ್ಟಣಗಳಲ್ಲಿನ ವೈದ್ಯರು ಅದನ್ನು ಬಳಸುತ್ತಿರಬಹುದಾದ್ದರಿಂದ, ಆ ಬಗ್ಗೆ ಪತ್ರಿಕೆಗಳಿಗೆ ಬರೆಯುವುದು ಅಥವಾ ಇತರೇ ವಿಧಾನಗಳಿಂದ ಪ್ರಚಾರ ಮಾಡುವುದು ಸ್ವಪ್ರತಿಷ್ಠೆಯಾಗಬಹುದೆಂಬ ಅನುಮಾನ ಮತ್ತು ಅಂಜಿಕೆ. ಅನೆಸ್ಥೀಸಿಯ ವಿಧಾನವೊಂದನ್ನು ಎಲ್ಲರಿ

ಗಿಂತ ಮೊಟ್ಟಮೊದಲು ಯಶಸ್ವಿಯಾಗಿ ಬಳಸಿದ್ದಕ್ಕೆ ಸಿಗಬಹುದಾದ ಗೌರವ ಪ್ರತಿಷ್ಠೆಗಳನ್ನು ತಾನೇ ನಿರಾಕರಿಸಿಕೊಂಡಂತಾಯಿತು.

ಅಮೆರಿಕಾದ ಕಾಂಗ್ರೆಸ್‌ನಲ್ಲಿ ಈಥರ್ ಸಮರ ನಡೆಯುತ್ತಿದ್ದ ಕೊನೆಯ ಹಂತದಲ್ಲಿ ವಿಷಯ ಲಾಂಗ್‌ನ ಗಮನಕ್ಕೆ ಬಂದಿತು. ಮಾನವ ಕಲ್ಯಾಣಕ್ಕಾಗಿರುವ ವೈದ್ಯವೃತ್ತಿಯಲ್ಲಿರುವವರು ನೋವನ್ನು ಹೋಗಲಾಡಿಸಲು ಬಳಸುವ ವಿಧಾನವೊಂದರಿಂದ ಆರ್ಥಿಕ ಲಾಭ ಮತ್ತು ಸ್ವಪ್ರತಿಷ್ಠೆಯ ದುರಾಶೆಯಿಂದ ಹೆಣಗಾಡುತ್ತಿರುವುದು ಅವನಿಗೆ ತೀವ್ರ ಜಿಗುಪ್ಸೆಯನ್ನುಂಟುಮಾಡಿತು. ಅಂತಹವರಿಗೆ ಅಂತಹ ಲಾಭಗಳು ದೊರೆಯುವುದು ಸಮಂಜಸವಲ್ಲವೆಂಬ ಸದಭಿಪ್ರಾಯದಿಂದ ಅವರೆಲ್ಲರಿಗಿಂತ ಮೊದಲೇ ಈಥರನ್ನು ತಾನು ಬಳಸುತ್ತಿದ್ದ ಬಗೆಗೆ ಸೆನೆಟರ್ ಡಾಸನ್‌ಗೆ ಪತ್ರ ಬರೆದ. ತನಗೆ ಆರ್ಥಿಕ ಲಾಭವಾಗಲೀ, ಗೌರವವಾಗಲೀ ಬೇಕಿಲ್ಲವೆಂಬುದನ್ನು ಅದರಲ್ಲಿ ಸ್ಪಷ್ಟಗೊಳಿಸಿದ್ದ.

ಕ್ರಾಫರ್ಡ್‌ಲಾಂಗ್ ೬೨ ವರ್ಷಗಳ ತುಂಬುಜೀವನ ನಡೆಸಿ, ಮಹಿಳೆಯೊಬ್ಬಳಿಗೆ ಹೆರಿಗೆ ಮಾಡಿಸುತ್ತಿರುವಾಗಲೇ "ಸನ್ನಿಹೊಡೆತ" (*Stroke*) ದಿಂದ ಮೂರ್ಛಿತನಾಗಿ ಅಸು ನೀಗಿದ !

ಅನೆಸ್ಥೀಸಿಯಾದ ಇತಿಹಾಸವನ್ನು ಇನ್ನೂ ಕೆದಕಿದರೆ ಕ್ರಾಫರ್ಡ್ ಲಾಂಗ್‌ಗಿಂತಲೂ ಮೊದಲು ಅದರ ಅರಿವಿದ್ದವರಿಲ್ಲದಿಲ್ಲ. ಜೋಸೆಫ್ ಪ್ರೀಸ್ಟ್ಲೆ ನೈಟ್ರಸ್ ಆಕ್ಸೈಡನ್ನು ಕಂಡುಹಿಡಿದದ್ದು ೧೭೭೨ರಲ್ಲಿ. ಅದರ ಸೇವನೆ ಮಿದುಳನ್ನು ಹಗುರಗೊಳಿಸಿ, ಮಾಂಸಖಂಡಗಳ ಶಕ್ತಿಯನ್ನು ಕುಗ್ಗಿಸುತ್ತದೆಂದು ಅವನು ಉಲ್ಲೇಖಿಸಿದ್ದ. ಪ್ರಸಿದ್ಧ ರಸಾಯನಶಾಸ್ತ್ರ ಪಟು ಹಂಫ್ರಿಡೇವಿ ಹಲ್ಲುನೋವನ್ನು ಹೋಗಲಾಡಿಸಲು ನೈಟ್ರಸ್ ಆಕ್ಸೈಡನ್ನು ಸೇವಿಸಿ (೧೮೦೦) ಪ್ರಯೋಜನ ಪಡೆದಿದ್ದಲ್ಲದೆ, ಅದರ ಉಪಯೋಗದಿಂದ ನೋವಿನ ಅರಿವಿಲ್ಲದ ಶಸ್ತ್ರಚಿಕಿತ್ಸೆ ನಡೆಸಬಹುದೆಂದು ಭವಿಷ್ಯ ನುಡಿದಿದ್ದ. ಆದರೆ ಈ ದಿಸೆಯಲ್ಲಿ ಮೊದಲಡಿಯಿಡಲು ಅರ್ಧಶತಮಾನವೇ ಹಿಡಿಯಿತು.

**ಕ್ಲೋರೋಫಾರಂ :**

ಅನೆಸ್ಥೀಸಿಯಾದ ಪ್ರಸ್ತಾಪ ಬಂದಾಗ ಜನಸಾಮಾನ್ಯರ ಮನಸ್ಸಿಗೆ

ಹೊಳೆಯುವುದು ಕ್ಲೋರೋಫಾರಂ (*Chloroform*). ಒಂದು ಕಾಲದಲ್ಲಿ ಅನೆಸ್ಥೀಸಿಯಾಕ್ಕೆ ಕ್ಲೋರೋಫಾರಂ ಪರ್ಯಾಯ ಪದವಾಗಿತ್ತು. ಈಗಲೂ ರೋಗಿಗಳು ನೋವಾಗದಿರಲು ಕ್ಲೋರೋಫಾರಂ ಕೊಡುವುದಿಲ್ಲವೇ ಎಂದು ಉದ್ಗರಿಸುವ ರೂಢಿಯಿದೆ. ಪ್ರಸ್ತುತ ಅದು ಬಳಕೆಯಲ್ಲಿಲ್ಲ. ಅಮೆರಿಕಾದಲ್ಲಿ ಅನೆಸ್ಥೀಸಿಯಾ ಬಗೆಗೆ ತರ್ಕ ನಡೆಯುತ್ತಿದ್ದಾಗ ಕ್ಲೋರೋಫಾರಂನ್ನು ಇಂಗ್ಲೆಂಡ್‌ನಲ್ಲಿ ಕೆಲವರು ಅದೇ ಉದ್ದೇಶಕ್ಕಾಗಿ ಬಳಸುತ್ತಿದ್ದರು. ಆದರೆ ಕ್ಲೋರೋಫಾರಂನ ವ್ಯಾಪಕ ಬಳಕೆಗೆ ಕಟುವಾದ ವಿರೋಧವಿತ್ತು.

ಮಾರ್ಟನ್ ಈಥರನ್ನು ಅಮೆರಿಕಾದಲ್ಲಿ ಉಪಯೋಗಿಸುತ್ತಿದ್ದ ಸಮಾಚಾರ ತಿಳಿದಮೇಲೆ ಲಂಡನ್‌ನ ಖ್ಯಾತ ವೈದ್ಯ ರಾಬರ್ಟ್ ಲಿಸ್ಟನ್ ರೋಗಿಯೊಬ್ಬನ ಕಾಲನ್ನು ಕತ್ತರಿಸಲು ಯಶಸ್ವಿಯಾಗಿ ಬಳಸಿದ್ದ. ಎಡಿನ್‌ಬರೋದ ಖ್ಯಾತ ಪ್ರಸವಶಾಸ್ತ್ರ ತಜ್ಞ ಜೇಮ್ಸ್ ಸಿಂಪ್ಸನ್ ೧೮೪೭ರಲ್ಲಿ ಹೆರಿಗೆ ಸಮಯದ ನೋವನ್ನು ಹೋಗಲಾಡಿಸಲು ಯಶಸ್ವಿಯಾಗಿ ಉಪಯೋಗಿಸಿ ಜನಪ್ರಿಯತೆ ಗಳಿಸಿದ್ದ. ತನ್ನ ಅನುಭವದ ಬಗೆಗೆ ವೈದ್ಯಕೀಯ ಪತ್ರಿಕೆಗಳಲ್ಲಿ ಲೇಖನಗಳನ್ನೂ ಬರೆದಿದ್ದ.

ಈಥರ್‌ನ ಕಾರ್ಯದಕ್ಷತೆಯ ಬಗೆಗೆ ಸಿಂಪ್ಸನ್‌ಗೆ ಅಪಾರ ನಂಬಿಕೆ ಇದ್ದರೂ ಅದರ ಅಹಿತಕರ ವಾಸನೆ ಮತ್ತು ಕೆಲವರಲ್ಲಿ ಅದರಿಂದುಂಟಾಗುತ್ತಿದ್ದ ಕೆಮ್ಮು, ಅಂತಹದೇ ಕಾರ್ಯದಕ್ಷತೆ ಇರುವ ಮತ್ತು ಅಹಿತಕರ ಗುಣಗಳಿರದ ಬೇರೊಂದು ಮದ್ದನ್ನು ಕಂಡುಹಿಡಿಯಲು ಕಾತರನಾಗಿದ್ದ.

ಸಿಂಪ್ಸನ್ ತನ್ನ ಗುರಿಸಾಧನೆಗಾಗಿ, ಸಹೋದ್ಯೋಗಿಗಳಾದ ಡಂಕನ್ ಮತ್ತು ಕೀತ್‌ರ ಜೊತೆ ಪ್ರತಿ ದಿನ ಸಾಯಂಕಾಲ ತನ್ನ ಮನೆಯಲ್ಲೇ ಪ್ರಯೋಗ ನಡೆಸಲಾರಂಭಿಸಿದ. ಹೊಸ ಹೊಸ ರಸಾಯನಿಕ ವಸ್ತುಗಳನ್ನು ಸ್ವತಃ ಅವರೇ ಸೇವಿಸಿ ಅವುಗಳ ಗುಣಾವಗುಣಗಳನ್ನು ಟಿಪ್ಪಣಿ ಮಾಡುತ್ತಿದ್ದರು. ಹಾಗೇ ಪರೀಕ್ಷಿಸಿದ ಪದಾರ್ಥಗಳಲ್ಲಿ ಕ್ಲೋರೋಫಾರಂ ಸಹ ಒಂದು.

ಕ್ಲೋರೋಫಾರಂನ್ನು ಬಟ್ಟಲಿನಲ್ಲಿರಿಸಿಕೊಂಡು ಅದರಿಂದೇಳುತ್ತಿದ್ದ ಆವಿಯನ್ನು ಅವರೆಲ್ಲರೂ ಆಸ್ವಾದಿಸಿದರು. ಅದರಿಂದ ಅವರ ಮನಸ್ಸಿನಲ್ಲಿ

ಆಹ್ಲಾದಕರ ಭಾವನೆ, ನಗು ಮೊದಲುಂಟಾಯಿತು. ಕ್ರಮೇಣ ಪ್ರಜ್ಞೆ ತಪ್ಪಿ ನೆಲಕ್ಕುರುಳಿದರು. ನೆಲಕ್ಕೆ ಬಿದ್ದು ಗಾಯಗೊಂಡಿದ್ದರೂ ಆ ಸಮಯದಲ್ಲಿ ನೋವಾಗದಿದ್ದುದು ಎಚ್ಚರಗೊಂಡಮೇಲೆ ಅರಿವಾಯಿತು. ಕ್ಲೋರೋಫಾರಂನ್ನು ಇನ್ನೂ ಹೆಚ್ಚಿನ ಸಂಶೋಧನೆಗೊಳಪಡಿಸಿ ಅದರ ಗುಣಲಕ್ಷಣಗಳನ್ನು ಖಚಿತಪಡಿಸಿದ ನಂತರ, ಹಲವಾರು ಮಹಿಳೆಯರಿಗೆ ಹೆರಿಗೆ ಸಮಯದಲ್ಲಿ ಬಳಸಿ ಒಳ್ಳೆಯ ಫಲಿತಾಂಶ ಪಡೆದರು. ಮುಂದೆ ಈಥರ್ ಬಳಕೆಯನ್ನು ನಿಲ್ಲಿಸಿ, ಕ್ಲೋರೋಫಾರಂನ್ನೇ ಮುಂದುವರಿಸಿದರು. ಇದರ ಬಗೆಗೂ ವೈದ್ಯಕೀಯ ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದರು.

**ವಿರೋಧ :**

ಅನೆಸ್ಥೀಸಿಯ ಬಳಕೆಯ ಬಗೆಗೆ ಅಮೆರಿಕಾದಲ್ಲಿ ಒಂದು ವಿಧದ ತರ್ಕ ವಿತರ್ಕ ನಡೆಯುತ್ತಿದ್ದರೆ ಇಂಗ್ಲೆಂಡ್‌ನಲ್ಲಿ ಈ ವಿಧಾನದ ಬಳಕೆಗೂ ತೀವ್ರ ವಿರೋಧ ಹುಟ್ಟಿಕೊಂಡಿತು. ಇಲ್ಲಿ ಪಟ್ಟಭದ್ರ ಹಿತಾಸಕ್ತಿಯ ಸಂಪ್ರದಾಯ ಶರಣರ ಜೊತೆಗೆ ಮತೀಯ ಗುರುಗಳೂ ಸಮರಕ್ಕಿಳಿದರು.

"ಹೆರಿಗೆಯ ನೋವು ದಯಾಮಯ ಭಗವಂತನ ಇಚ್ಛೆ. ಅದರಿಂದ ಅದೊಂದು ಸ್ವಾಭಾವಿಕ ಕ್ರಿಯೆ. 'ದುಃಖದಿಂದಲೇ ನೀನು ಮಕ್ಕಳನ್ನು ಹೆರತಕ್ಕದ್ದು' *(In Sarrow Thou Shalt Bring Forth Children—Genesis III : 16)* ಕೃತಕ ವಿಧಾನಗಳಿಂದ ನೋವನ್ನು ದಮನ ಮಾಡುವವರು ಭಗವಂತನ ಕೋಪಕ್ಕೆ ಗುರಿಯಾಗ ಬೇಕಾಗುತ್ತದೆ. ಅಂತಹವರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಗುತ್ತದೆ" ಇದು ಮತಗುರುಗಳ ವಾದದ ಸರಣಿ.

ಜೇಮ್ಸ್ ಸಿಂಪ್ಸನ್, ಆ ಕಾಲದಲ್ಲಿ ದಕ್ಷ ಹಾಗೂ ಜನಪ್ರಿಯ ವೈದ್ಯ. ಸಮಾಜದಲ್ಲೂ ಉನ್ನತ ಸ್ಥಾನಮಾನವಿತ್ತು. ಮತಗುರುಗಳ ಪೊಳ್ಳು ವಾದ ಮತ್ತು ಬೆದರಿಕೆಗಳಿಗೆ ಮಣಿಯಲಿಲ್ಲ. ಕ್ಲೋರೋಫಾರಂನ್ನು ಬಳಸುತ್ತಲೇ ಮುಂದುವರಿದ. ನೋವಿನ ಅನುಭವವಿದ್ದ ಹಲವಾರು ಮಹಿಳೆಯರು ಧೈರ್ಯದಿಂದ ಕ್ಲೋರೋಫಾರಂ ಸಹಾಯದಿಂದ ಅವನಿಂದಲೇ ಹೆರಿಗೆ ಮಾಡಿಸಿಕೊಂಡರು.

ಸಿಂಪ್ಸನ್ ಅವರ ವಾದಗಳಿಗೆ ಕಟುವಾದ ಉತ್ತರಪೀಯುತ್ತಿದ್ದ. ಹೊಲದಲ್ಲಿ ರೈತರು ಬೆಳೆಯುವ ಗೋಧಿಯ ಜೊತೆ ಬೆಳೆಯುವ ಕಳೆ ಭಗವಂತನ ಪ್ರೇರೇಪಣೆಯಿಂದಲೇ ಬೆಳೆಯುತ್ತದೆ. ಅದನ್ನೇಕೆ ಕೀಳಬೇಕು? "ಮಣ್ಣಿನಿಂದ ಬಂದ ನೀನು ಮಣ್ಣಿಗೇ ಹಿಂದಿರುಗಬೇಕು" (*Dust thou art and unto the dust shalt thou return*) ಎಂದು ಧರ್ಮಗ್ರಂಥಗಳಲ್ಲಿ ಉಲ್ಲೇಖ. ಅದರಿಂದ ಕಾಯಿಲೆಗಳಿಂದ ನರಳಿ ಸಾಯುವ ಮಾನವರಿಗೆ ಔಷಧೋಪಚಾರ ಮಾಡಿ ಬದುಕಿಸುವುದು ಮಹಾ ಪಾಪವಲ್ಲವೇ? ಧಾನ್ಯದಿಂದ ಹೊಟ್ಟನ್ನು ದೈವದತ್ತವಾದ ಗಾಳಿಯಿಂದ ಬೇರ್ಪಡಿಸದೆ, ಯಂತ್ರದ ನೆರವನ್ನು ಪಡೆಯುವುದರಿಂದ ಭಗವಂತ ಕೋಪಗೊಳ್ಳುವುದಿಲ್ಲವೇ? ಎಡ್ವರ್ಡ್‌ಜೆನ್ನರ್ ವ್ಯಾಕ್ಸಿನೇಷನ್ ಪದ್ಧತಿಯನ್ನು ಜಾರಿಗೆ ತಂದಾಗ ಧರ್ಮದ ಸೋಗಿನಲ್ಲಿ ವಿರೋಧವಿದ್ದರೂ ಈಗ ಅದರಿಂದ ಜನರಿಗೆಷ್ಟು ಉಪಕಾರವಾಗಿದೆ—ಹೀಗೆ ಹಲವಾರು ಉದಾಹರಣೆಗಳನ್ನು ಕೊಟ್ಟು ತನ್ನ ವಿರೋಧಿಗಳಿಗೆ ಉತ್ತರಿಸಿದನು. ಆಡಂ ಮತ್ತು ಈವ್‌ರ ಸೃಷ್ಟಿಯು ಇನ್ನೊಂದು ಉದಾಹರಣೆ, ಅನೆಸ್ಥೀಸಿಯ ಪದ್ಧತಿಯನ್ನು ಭಗವಂತನೇ ಜಾರಿಗೆ ತಂದನೆಂದು ಅವರ ವಾದಗಳ ಬುಡಕ್ಕೆ ಕೊಡಲಿಪೆಟ್ಟು ಕೊಟ್ಟ—"ಸೃಷ್ಟಿಯ ಆದಿಯಲ್ಲಿ ಭಗವಂತನು ಆಡಂನಿಂದ ಇವಳನ್ನು ಸೃಷ್ಟಿಸುವಾಗ ಆಡಂಗೆ ದೀರ್ಘ ನಿದ್ರೆ ಬರುವಂತೆ ಮಾಡಿ, ಎದೆಯ ಪಕ್ಕೆಲಬನ್ನು ತೆಗೆದು ನಂತರ ಗಾಯವನ್ನು ಮುಚ್ಚಿದನು". (*Genesis II:21*) —ಈ ಉಲ್ಲೇಖಕ್ಕೆ ಧರ್ಮಗುರುಗಳು ನಿರುತ್ತರರಾಗಬೇಕಾಯಿತು.

ಪ್ರಗತಿ ವಿರೋಧಿಗಳಾದ ಕೆಲವು ವೈದ್ಯರೂ ಕೂಡ ಅನೆಸ್ಥೀಸಿಯ ವಿರೋಧಿಗಳಾಗಿದ್ದರು. ಫಿಲಡೆಲ್ಫಿಯಾದ ಮೀಗ್ಸ್ ಮತ್ತು ಅವನ ಅನುಯಾಯಿಗಳು—ಪ್ರಸವವೇದನೆ ಆನಂದದಾಯಕ, ಹಿತಕರ, ಶರೀರ ಸಹಜಕ್ರಿಯೆ ಮತ್ತು ಜೀವತ್ರಾಣದ ಅನುಭವ, ಅಲ್ಲಿಯವರೆಗೂ ಹೆರಿಗೆ ನೋವನ್ನು ಹೋಗಲಾಡಿಸಲು ಯಾರೂ ಉಪಯೋಗಿಸಿಲ್ಲ. ಅದರಿಂದ ಅದು ಸರಿಯಲ್ಲ—ಎಂಬುದು ಅವರೆಲ್ಲರ ವಾದ.

ಬಿಸಿಲಿನ ಬಾಧೆಯನ್ನು ತಡೆಯಲು ಶಿರಸ್ತ್ರಾಣ (*Hat*) ಉಪಯೋಗಿಸುವುದು, ಊರಿಂದೂರಿಗೆ ನಡೆಯುವ ಬದಲು ರೈಲು ಪ್ರಯಾಣ ಮಾಡು

ವುದು, ಊಟದ ಸಮಯದಲ್ಲಿ ಚಮಚ ಉಪಯೋಗಿಸುವ ಪದ್ಧತಿಗಳು ಮೊದಲಿಂದಲೂ ಇರಲಿಲ್ಲ. ಬಿಸಿಲ ಬಾಧೆ, ನಡೆಯುವುದು, ಊಟವನ್ನು ಕೈಗಳಿಂದಲೇ ಮಾಡುವುದು—ಇವೆಲ್ಲಾ ಸಹಜ ಕ್ರಿಯೆಗಳೇ. ಹಾಗಿದ್ದ ಮೇಲೆ ಕೃತಕ ವಿಧಾನಗಳ ಬಳಕೆಯ ಆವಶ್ಯಕತೆ ಏನು?—ಸಿಂಪ್ಸನ್‌ನ ಮಾರುತ್ತರ ಅವರೆಲ್ಲರ ಬಾಯಿ ಮುಚ್ಚಿಸಿತು.

ಈ ಎಲ್ಲಾ ವಾದ-ವಿವಾದಗಳು ಜರುಗುತ್ತಿರುವಾಗಲೇ ವಿಕ್ಟೋರಿಯ ಮಹಾರಾಣಿಗೆ ಏಳನೇ ಹೆರಿಗೆಯ ಸಮಯ. ಪ್ರಸವವೇದನೆ ಶುರುವಾಗಿ ಒಂದೆರಡು ದಿನಗಳಾದರೂ ಹೆರಿಗೆಯಾಗಿಲ್ಲ. ಬಾಧೆ ತಡೆಯಲಾರದೇ ಗೋಳಾಡುತ್ತಿದ್ದಾಳೆ. ಕೊನೆಗೂ ಅರಮನೆ ವೈದ್ಯರ ಸಲಹೆಯಂತೆ, ಲಂಡನ್‌ನಲ್ಲಿ ಕ್ಲೋರೋಫಾರಂ ಅನೆಸ್ಥೀಸಿಯ ನೀಡುವ ಜಾನ್‌ಸ್ನೋ ಎಂಬ ತಜ್ಞ ವೈದ್ಯನನ್ನು ಕರೆಸಿ ಕ್ಲೋರೋಫಾರಂ ನೆರವಿನಿಂದ ಸುಖಪ್ರಸವ ಮಾಡಿಸಲಾಯಿತು. ಕ್ಲೋರೋಫಾರಂ ಅರಮನೆಯಲ್ಲಿ ಜಯಭೇರಿ ಹೊಡೆದಮೇಲೆ ವಿರೋಧ ಮಾಯವಾಯಿತು.

ಕ್ಲೋರೋಫಾರಂನ ಯಶಸ್ವಿ ಹಾಗೂ ವ್ಯಾಪಕ ಬಳಕೆಗೆ ಕಾರಣಕರ್ತ ನಾದ ಜೇಮ್ಸ್‌ಸಿಂಪ್ಸನ್ ವಿಶ್ವಮಾನ್ಯನಾದ. ಬ್ರಿಟನ್ನಿನ ಅರಮನೆ ವೈದ್ಯ ನಾಗಿ ನೇಮಕಗೊಂಡನಲ್ಲದೆ ಪ್ರತಿಷ್ಠಿತ ನೈಟ್‌ಹುಡ್ (*Knighthood*) ಕೂಡ ದೊರೆಯಿತು. ಆವನು ೧೮೭೦ರಲ್ಲಿ ಗತಿಸಿದಾಗ ಲಂಡನ್ ನಗರದಲ್ಲಿ ಅವನ ಗೌರವಾರ್ಥ ಹರತಾಳ ಆಚರಿಸಲಾಯಿತು !

ಪ್ರಸ್ತುತ ಸಮಯದಲ್ಲಿ ಅನೆಸ್ಥೀಸಿಯಾ ಪದ್ಧತಿ ವೈದ್ಯಕೀಯ ವಿಭಾಗ ದಲ್ಲಿ ಅತ್ಯಂತ ನಿಖರವಾದ ವಿಜ್ಞಾನವಾಗಿ ಬೆಳೆದಿದೆ. ಈಗಲ್ಲಿ ಸಂದೇಹ, ಊಹಾಪೋಹಗಳಿಗೆಡೆಯಿಲ್ಲ, ಅಂಧಶ್ರದ್ಧೆ, ಮೂಢನಂಬಿಕೆ, ದುರಾಶೆ ಮತ್ತು ಸ್ವಪ್ರತಿಷ್ಠೆಯವರಿಗೆ ತಾಣವಿಲ್ಲ. ಯಾವ ಹೊಸ ವಿಷಯ ಅರಿ ವಾದರೂ ಮಾನವೀಯತೆಯ ದೃಷ್ಟಿಯಿಂದ ಅದು ಜಗಜ್ಜಾಹೀರ.

ಕೇವಲ ೧೫೦ ವರ್ಷಗಳ ಹಿಂದೆ ಶಸ್ತ್ರಚಿಕಿತ್ಸಾ ಸಮಯದಲ್ಲಿ ನೋವನ್ನು ಕಡಿಮೆ ಮಾಡುವುದರ ಬಗೆಗೆ ಏನೂ ಅರಿವಿರದ ವೈದ್ಯಲೋಕ ಈಗ ರೋಗಿಯನ್ನು ಸಂಪೂರ್ಣ ಪ್ರಜ್ಞೆತಪ್ಪಿಸಿ, ಕೆಲಕಾಲ ಜೀವ ಇರ ಬಹುದಾದ ಚಿಹ್ನೆಗಳೇ ಇಲ್ಲದಂತೆ ಮಾಡಿ, ಗಂಟೆಗಟ್ಟಲೆ ಶಸ್ತ್ರಚಿಕಿತ್ಸೆ ನಡೆಸಿ

ನಂತರ ಎಚ್ಚರಿಸುತ್ತಾರೆ, ಅರ್ಥಾತ್ ಜೀವಬರಿಸುತ್ತಾರೆ! ಇತ್ತೀಚಿನ ಚಮತ್ಕಾರಿಕ ಶಸ್ತ್ರಚಿಕಿತ್ಸೆಗಳೆನಿಸಿದ "ತೆರೆದ ಹೃದಯ ಶಸ್ತ್ರಚಿಕಿತ್ಸೆ" (*Open Heart Surgery*), "ಮೂತ್ರಪಿಂಡ ಮತ್ತು ಹೃದಯ ಮೊದಲಾದ ಅವಯವಗಳ ಕಸಿ ಚಿಕಿತ್ಸೆ (*Kidney, Heart Transplantations*) ಸಂದರ್ಭದಲ್ಲಿ ಹೃದಯ ಬಡಿತ, ನಾಡಿಮಿಡಿತದಂತಹ ಜೀವವಿರುವ ಕುರುಹುಗಳೇ ಇರುವುದಿಲ್ಲ. ಹೃದಯ ಮತ್ತು ಶ್ವಾಸಕೋಶ ಗಳ ಕೆಲಸವನ್ನು ಕೃತಕಯಂತ್ರ (*Heart-Lung Machine*)ವೊಂದು ನಿರ್ವಹಿಸುತ್ತದೆ! ಅನೆಸ್ಥೀಸಿಯ ಪದ್ಧತಿ ವಿಕಾಸಗೊಂಡಂತೆಲ್ಲಾ, ಶಸ್ತ್ರ ಚಿಕಿತ್ಸಾವಿಧಾನದಲ್ಲಿ ಅಗಾಧ ಪ್ರಗತಿಯಾಯಿತು. ರೋಗಿಯ ಸ್ಥಿತಿ ಎಷ್ಟೇ ಹದಗೆಟ್ಟಿದ್ದರೂ ಅವನನ್ನು ಚಿಕಿತ್ಸೆಗೊಳಪಡಿಸಲು ಸಾಧ್ಯ, ಶಸ್ತ್ರವೈದ್ಯನ ಚಾಕು ಕತ್ತರಿಗಳಿಗೆ ಶರೀರದಲ್ಲಿ ಈಗ ನಿಲುಕದ ತಾಣಗಳಿಲ್ಲ, ಚಿಕಿತ್ಸೆಗೊಳ ಗಾಗದ ರೋಗಗಳಿಲ್ಲ. ವೈಚಾರಿಕತೆ ಮತ್ತು ವೈಜ್ಞಾನಿಕ ಮನೋಭಾವ ಮಾನವರನ್ನು ಎಷ್ಟೆತ್ತರಕ್ಕೆ ಏರಿಸಬಹುದೆಂಬುದಕ್ಕೆ ಅನೆಸ್ಥೀಸಿಯ ನಡೆದುಬಂದ ದಾರಿ ಜ್ವಲಂತ ನಿದರ್ಶನ.

# ೨. ಬಾಣಂತಿ ಜ್ವರ

ವೈದ್ಯರು ರೋಗಿಗಳನ್ನು ಮುಟ್ಟಿ ಪರೀಕ್ಷಿಸಿದ ನಂತರ ಅಥವಾ ಗಾಯ, ಹುಣ್ಣುಗಳನ್ನು ಬ್ಯಾಂಡೇಜ್ ಮಾಡುವ ಸಮಯಗಳಲ್ಲಿ ತಮ್ಮ ಕೈಗಳನ್ನು ಪ್ರತಿ ಸಾರಿ ಸಾಬೂನಿನಿಂದ ಕೈ ತೊಳೆದು ಕ್ರಿಮಿನಾಶಕ ದ್ರಾವಣ ಅದ್ದಿದಲ್ಲಿ ಶುಚಿ ಮಾಡುವುದನ್ನು ನೋಡಿರಬಹುದಲ್ಲವೇ ? ಶಸ್ತ್ರಚಿಕಿತ್ಸಾ ಕೊಠಡಿಗಳಲ್ಲಿ ವೈದ್ಯರು ಮತ್ತು ಸಿಬ್ಬಂದಿಯವರು ಅನುಸರಿಸುವ ಕಟ್ಟು ನಿಟ್ಟಾದ ಶುಚಿತ್ವದ ಮತ್ತು ಚಿಕಿತ್ಸಾ ಸಲಕರಣೆ, ಬಟ್ಟೆಬರೆಗಳನ್ನು ಶುಚಿ ಗೊಳಿಸುವ (*Sterilization*) ವಿಧಾನಗಳಂತೂ ಅತ್ಯಂತ ಮೇಲ್ಮಟ್ಟ ದ್ದಾಗಿರುತ್ತವೆ. ಆಸ್ಪತ್ರೆಗಳು ಶುಚಿತ್ವದ ಆದರ್ಶ ಮಾದರಿಯಾಗಿರ ಬೇಕೆಂಬುದು ಎಲ್ಲರ ಮಹದಾಶೆ. ಅದಕ್ಕಾಗಿ ಅವರೆಲ್ಲರೂ ಸದಾ ಶ್ರಮಿಸು ವರು.

ಆಸ್ಪತ್ರೆಗಳ ಶುಚಿತ್ವದ ಬಗೆಗೆ ಅಷ್ಟೊಂದು ಮುತುವರ್ಜಿ ವಹಿಸಲು ಪ್ರಬಲ ಕಾರಣಗಳಿರಬೇಕಲ್ಲವೇ ? ಅಲ್ಲಿ ಈ ನಿಯಮಗಳು ಹೇಗೆ, ಯಾರಿಂದ ಶುರುವಾದುವೆಂಬುದು ಈಗಿನ ತಲೆಮಾರಿನವರಿಗೆ ತಿಳಿದಿರಲಾರದು. ಈ ನಿಯಮಗಳ ಆಚರಣೆಗೆ ಮೊದಲು ಆಸ್ಪತ್ರೆಗಳ ಸ್ಥಿತಿಗತಿಗಳು ಹೇಗಿದ್ದ ವೆಂಬುದು ಊಹಿಸಲಸಾಧ್ಯ. ಹೇಗೆ ಆಸ್ಪತ್ರೆಗಳು ಪ್ರಾರಂಭವಾದುವೆನ್ನು ವುದಕ್ಕೂ ನಿಖರವಾದ ಪುರಾವೆಗಳಿಲ್ಲ.

ಭೂಮಿಯ ಮೇಲೆ ಮಾನವನು ಜನ್ಮತಾಳಿದಾಗಿನಿಂದ ರೋಗರುಜಿನ ಗಳು ಅವನನ್ನು ಬಾಧಿಸಲು ತೊಡಗಿರುವುದಂತೂ ನಿಜ. ಆದರೆ ಕಳೆದ ಶತಮಾನದ ಕೊನೆಯರ್ಧದವರೆಗೂ ಕಾಯಿಲೆಗಳ ಉಗಮ ಹಾಗೂ ಅವುಗಳ ಯಶಸ್ವೀ ಉಪಚಾರದ ಕ್ರಮಗಳು ತಿಳಿದಿರಲಿಲ್ಲವೆಂದರೆ ಆಶ್ಚರ್ಯವಲ್ಲವೇ? ಅವುಗಳ ಉಗಮಕ್ಕೆ ಭಗವಂತನ ಕೋಪ, ದೆವ್ವ ಭೂತಗಳ ಕಿರುಕುಳ ಮುಂತಾದುವು ಕಾರಣವೆಂಬುದು ಬಹುಮಂದಿಯ ಅಭಿಪ್ರಾಯವಾಗಿತ್ತು.

ಅವುಗಳ ನಿವಾರಣೆಗೆ ಪೂಜಾರಿಗಳು, ಮಂತ್ರವಾದಿಗಳೇ ಈ ವೈದ್ಯರು ! ಜನರಲ್ಲಿ ಅಜ್ಞಾನ, ಮೂಢನಂಬಿಕೆ, ಅಂಧಶ್ರದ್ಧೆ ತುಂಬಿತುಳುಕಾಡುತ್ತಿದ್ದ ಕಾಲವದು.

ರೋಗರುಜಿನಗಳಿಂದ ನರಳಾಡುತ್ತಿದ್ದ ನಿರ್ಗತಿಕರನ್ನು ಪಾಳುಮನೆಗಳಲ್ಲೋ, ಕುದುರೆ ಲಾಯಗಳಲ್ಲೋ ಒಂದೆಡೆ ಸೇರಿಸಿ, ಧರ್ಮಾಧಿಕಾರಿಗಳೋ ಅಥವಾ ದಯಾಳು ರಾಜರೋ ಮಾಡಿದ ಏರ್ಪಾಡುಗಳೇ ಮುಂದೆ ಆಸ್ಪತ್ರೆಗಳಾಗುವುದಕ್ಕೆ ತಳಹದಿಯಾಗಿರಬೇಕು. ಶುಚಿತ್ವದ ಮಹತ್ವವನ್ನರಿಯದ ಆ ಕಾಲದ ಆಸ್ಪತ್ರೆಗಳು ಕೊಳೆತು ನಾರುವ ಹುಣ್ಣುಗಳಿದ್ದ ರೋಗಿಗಳಿಂದಲೂ, ಹೆಣಗಳಿಂದಲೂ ತುಂಬಿದ್ದು ದುರ್ಗಂಧಮಯವಾಗಿರುತ್ತಿದ್ದವು. ಕಲಿತ ವೈದ್ಯರಾಗಲೀ, ದಾದಿಯರಾಗಲೀ ಸೂಕ್ತ ಔಷಧಿಗಳಾಗಲೀ ಅಲ್ಲಿ ಲಭ್ಯವಿರಲಿಲ್ಲ. ಯೂರೋಪ್, ಅಮೆರಿಕಾದಂತಹ ಮುಂದುವರಿದ ದೇಶಗಳಲ್ಲೂ ಈಗ್ಗೆ ೧೫೦ ವರ್ಷಗಳವರೆಗೂ ಈ ಪರಿಸ್ಥಿತಿ ಇತ್ತೆಂದರೆ ನಂಬುವುದಸಾಧ್ಯ.

ಜನರಲ್ಲಿ ವೈಚಾರಿಕತೆ ಮತ್ತು ವೈಜ್ಞಾನಿಕ ಮನೋಭಾವ ಇನ್ನೂ ಮೂಡಿಬಂದಿರಲಿಲ್ಲ. ಜೊತೆಗೆ ಸಮಾಜದ ಪ್ರತಿಷ್ಠರು ಮತ್ತು ಮುಂದಾಳುಗಳೆನಿಸಿಕೊಂಡವರು ಸಂಪ್ರದಾಯ ಶರಣರಾಗಿದ್ದು, ಪ್ರತಿಗಾಮಿಗಳಾಗಿದ್ದರು. ಹೆಸರಾಂತ ವೈದ್ಯರೂ ಸಹ ಹೊಸ ಚಿಕಿತ್ಸಾ ವಿಧಾನಗಳನ್ನು ತಮ್ಮೆಲ್ಲಾ ಪ್ರಭಾವಗಳಿಂದ ವಿರೋಧಿಸುತ್ತಿದ್ದರು. ಗಾಯಗಳಿಗೆ ನಂಜಾಗಿ ಕೀವಾಗುವುದರ ಕಾರಣ ತಿಳಿಯದ ಆ ಕಾಲದ ವೈದ್ಯರು, ಕೀವಾಗುವುದು ಶುಭಸೂಚನೆ (*Laudable Pus*) ಎಂದು ನಂಬಿದ್ದರು !

ಯಾವುದಾದರೂ ಕಾರಣದಿಂದಾದ ಗಾಯದಲ್ಲಿ ಕೀವಾಗಿ ನಂಜೇರುವುದು ಸರ್ವೇಸಾಮಾನ್ಯವಾಗಿತ್ತು. ಶಸ್ತ್ರಚಿಕಿತ್ಸೆಗೊಳಗಾದವರು ಮತ್ತು ಪ್ರಸವವಾದವರೂ ಸಹಾ ಕೀವುಗಟ್ಟಿಕೊಂಡು ನಂಜಿನ ಜ್ವರದಿಂದ ನರಳಿ ಸಾಯುವುದು ರೂಢಿಯಾಗಿತ್ತು. ಬಾಣಂತಿಯರಿಗೆ ಈ ರೀತಿ ನಂಜಾಗುವ ಪರಿಸ್ಥಿತಿಗೆ "ಬಾಣಂತಿ ಜ್ವರ", "ಬಾಣಂತಿ ನಂಜು" (*Puerperal Fever, Puerperal Sepsis, Childbed Fever*) ಎಂದು ಹೆಸರು. ಈ ಉಪದ್ರವದಿಂದ ಅಸಂಖ್ಯಾತ ತಾಯಂದಿರು ಸಾಯುತ್ತಿದ್ದರು.

ಹೆಸರಾಂತ ಪ್ಯಾರೀಸ್ ಮತ್ತು ವಿಯನ್ನಾದ ಆಸ್ಪತ್ರೆಗಳಲ್ಲಿ ಹೆರಿಗೆಯಾದವ ರಲ್ಲಿ ಶೇಕಡ ೬೦–೭೫ರಷ್ಟು ಬಾಣಂತಿಯರು ಬದುಕುತ್ತಿರಲಿಲ್ಲ. ಜರ್ಮನಿಯ ಕೀಲ್‌ನಗರದ ಆಸ್ಪತ್ರೆಯಲ್ಲಿ ಪ್ರತಿ ನಾಲ್ವರಿಗೊಬ್ಬರು, ಬರ್ಲಿನ್‌ನಲ್ಲಿ ಮೂವರಿಗೊಬ್ಬರು ಮತ್ತು ಚೀನಾದ ಆಸ್ಪತ್ರೆಯಲ್ಲಿ ಹೆರಿಗೆಗೆ ಸೇರಿದವರೆಲ್ಲರೂ ಈ ರೋಗಕ್ಕೆ ತುತ್ತಾಗುತ್ತಿದ್ದರೆಂದರೆ ಸಮಸ್ಯೆಯ ಗಂಭೀರತೆ ಎಷ್ಟೆಂಬುದರ ಅರಿವಾಗಬಹುದು.

ಬಾಣಂತಿ ಜ್ವರದ ಮೂಲಕಾರಣ ಮತ್ತು ರೂಪುರೇಷೆಗಳನ್ನು ಮೊಟ್ಟಮೊದಲು ಬಹಿರಂಗಪಡಿಸಿದ ಕೀರ್ತಿ ಹಂಗೇರಿಯಾದ ಇಗನಾಜ್ ಫಿಲಿಪ್ ಸೆಮ್ಮೆಲ್ವೀಸ್ (*Iganaz Philip Semmel Weis*) ಗೆ ಸಲ್ಲಬೇಕು. ಆಶ್ಚರ್ಯದ ಸಂಗತಿಯೆಂದರೆ ಈ ಕಾರಣಕ್ಕಾಗಿ ಅವನು ಅಪಾರ ಕಷ್ಟನಷ್ಟಗಳನ್ನನುಭವಿಸಿ, ಅಂತಹುದೇ ರೋಗಕ್ಕೆ ತುತ್ತಾದದ್ದು. ವೈದ್ಯಕೀಯ ಇತಿಹಾಸದಲ್ಲಿ ಸೆಮ್ಮೆಲ್ವೀಸ್ ದುರಂತ ಸ್ಮರಣೀಯ ಮೈಲಿಗಲ್ಲು.

**ಸೆಮ್ಮೆಲ್ವೀಸ್ :**

ಸೆಮ್ಮೆಲ್ವೀಸ್ ಹಂಗೇರಿಯಾದ ಬುಡಾಪೆಸ್ಟ್‌ನಲ್ಲಿ ಜನಿಸಿದ್ದು (೧೮೧೮). ಬಾಲ್ಯದ ವಿದ್ಯಾಭ್ಯಾಸವನ್ನು ಅಲ್ಲೇ ಮುಗಿಸಿ, ನ್ಯಾಯಶಾಸ್ತ್ರ ದಲ್ಲಿ ಹೆಚ್ಚಿನ ಪರಿಣತಿಯನ್ನು ಪಡೆಯಲು ನೆರೆಯ ರಾಷ್ಟ್ರ ಆಸ್ಟ್ರಿಯಾದ ವಿಯನ್ನಾ ವಿಶ್ವವಿದ್ಯಾನಿಲಯಕ್ಕೆ ಸೇರಿದ.

ನ್ಯಾಯಶಾಸ್ತ್ರದ ವಿದ್ಯಾರ್ಥಿ ಸೆಮ್ಮೆಲ್ವೀಸ್ ವೈದ್ಯನಾದದ್ದು ಒಂದು ಆಕಸ್ಮಿಕದಿಂದ. ವಿಯನ್ನಾ ವಿಶ್ವವಿದ್ಯಾನಿಲಯದಲ್ಲಿ ನ್ಯಾಯಶಾಸ್ತ್ರ ಮತ್ತು ವೈದ್ಯಕೀಯ ವಿಷಯಗಳ ಕಾಲೇಜ್ ಒಂದೇ ಕಟ್ಟಡದ ವಿವಿಧ ಭಾಗಗಳಲ್ಲಿ ದ್ದವು. ಸ್ನೇಹಿತರ ಜೊತೆ ಸೆಮ್ಮೆಲ್ವೀಸ್ ಅಂಗರಚನಾ ಶಾಸ್ತ್ರದ ಪ್ರಯೋ ಗಾಲಯಕ್ಕೆ ಭೇಟಿ ನೀಡುವ ಅವಕಾಶ ದೊರೆತಿತ್ತು. ಮಾನವನ ಅಂಗ ರಚನೆಯ ಬಗೆಗೆ ಅಲ್ಲಿನ ಪ್ರದರ್ಶನ ಅವನ ಕುತೂಹಲವನ್ನು ಕೆರಳಿಸಿತು. ಆ ವಿಭಾಗದ ಮುಖ್ಯಸ್ಥ ಪ್ರೊಫೆಸರ್ ರೋಕಿಟಾನ್‌ಸ್ಕಿ(*RokiTansky*) ಅವನ ಕುತೂಹಲವನ್ನು ನೋಡಿ ಮುಂದೆ ಅವನು ನ್ಯಾಯಶಾಸ್ತ್ರವನ್ನು

ತ್ಯಜಿಸಿ, ವೈದ್ಯಕೀಯ ವಿಭಾಗಕ್ಕೆ ಬದಲಾಯಿಸಿಕೊಳ್ಳಲು ಸಹಾಯ ಮಾಡಿದನು. ಸೆಮ್ಮೆಲ್ವೀಸ್ ವೈದ್ಯಕೀಯ ವಿಷಯಗಳನ್ನು ಅತ್ಯಂತ ಶ್ರದ್ಧೆಯಿಂದ ಅಭ್ಯಸಿಸಿದ್ದಲ್ಲದೆ ಪ್ರಸವ ಶಾಸ್ತ್ರದಲ್ಲಿ ವಿಶೇಷ ಪಾಂಡಿತ್ಯ ಗಳಿಸಿ ವೈದ್ಯನಾದನು (೧೮೪೪).

ಪ್ರಸವ ಶಾಸ್ತ್ರದಲ್ಲಿ ಹೆಚ್ಚಿನ ಆಸಕ್ತಿಯಿದ್ದ ಡಾ॥ ಸೆಮ್ಮೆಲ್ವೀಸ್‌ಗೆ ವಿಯನ್ನಾ ವಿಶ್ವವಿದ್ಯಾನಿಲಯದ ಹೆರಿಗೆ ಆಸ್ಪತ್ರೆಯಲ್ಲಿನ ಮುಖ್ಯ ಸಹಾಯಕ ವೈದ್ಯನ ಹುದ್ದೆಗೆ ಸೇರಬೇಕೆಂಬ ಹಂಬಲ. ಆದರೆ ಆ ವಿಭಾಗದ ಮುಖ್ಯಸ್ಥ ಕ್ಲೈನ್ (*Klein*) ಗೆ ಪರದೇಶದವನಾದ ಸೆಮ್ಮೆಲ್ವೀಸ್‌ಗೆ ಈ ಹುದ್ದೆಯನ್ನು ನೀಡಲು ಸಮ್ಮತಿ ಇಲ್ಲ. ಆದರೂ ಕೆಲಕಾಲ ಅವನ ಕಾರ್ಯದಕ್ಷತೆಯನ್ನು ಮನಗಂಡನಂತರ ಮುಖ್ಯ ಸಹಾಯಕನ ಹುದ್ದೆಯನ್ನು ಕ್ಲೈನ್ ದೊರಕಿಸಿ ಕೊಟ್ಟನು.

**ಬಾಣಂತಿ ಜ್ವರದ ಸಮಸ್ಯೆ :**

ವಿಯನ್ನಾ ಹೆರಿಗೆ ಆಸ್ಪತ್ರೆಯಲ್ಲಿ ಎರಡು ವಿಭಾಗಗಳಿದ್ದುವು. ಒಂದನೇ ವಿಭಾಗದಲ್ಲಿ ವೈದ್ಯಕೀಯ ವಿದ್ಯಾರ್ಥಿಗಳಿಗೆ ತರಬೇತಿ, ಎರಡನೇ ವಿಭಾಗದಲ್ಲಿ ಸೂಲಗಿತ್ತಿಯರಿಗೆ ತರಬೇತಿ. ಎರಡಕ್ಕೂ ಕ್ಲೈನ್‌ನೇ ಮುಖ್ಯಸ್ಥ. ವಿಭಾಗಗಳಿಗೆ ಗರ್ಭಿಣಿಯರ ಸೇರ್ಪಡೆ ಸರದಿಯ ಪ್ರಕಾರ. ಬಾಣಂತಿ ಜ್ವರದ ಹಾವಳಿ ಹೆರಿಗೆ ಆಸ್ಪತ್ರೆಯಲ್ಲಿ ಸಾಕಷ್ಟಿದ್ದು, ಒಂದನೇ ವಿಭಾಗದಲ್ಲಿ ಅದರಿಂದ ಸಾಯುತ್ತಿದ್ದವರ ಸಂಖ್ಯೆ ಎರಡನೆಯ ವಿಭಾಗದಲ್ಲಿ ಸಾಯುತ್ತಿದ್ದುದಕ್ಕೆ ಹತ್ತು ಪಟ್ಟು ಜಾಸ್ತಿ ! ಒಂದನೇ ವಿಭಾಗಕ್ಕೆ ದಾಖಲಾಗುವುದನ್ನು ತಪ್ಪಿಸಿಕೊಳ್ಳಲು ಗರ್ಭಿಣಿಯರು ಶತಪ್ರಯತ್ನ ಪಡುತ್ತಿದ್ದರಾದರೂ, ಹೆರಿಗೆ ಶುರುವಾಗುವ ದಿನದ ನಿರ್ಧಾರ ಅವರ ವೈಯಕ್ತಿಕ ಇಚ್ಛೆಯಂತಾಗಲು ಸಾಧ್ಯವಿರಲಿಲ್ಲ.

ಬಾಣಂತಿ ಜ್ವರದ ಹಾವಳಿ ಈಗ ಇಲ್ಲವೆಂದೇ ಹೇಳಬಹುದು. ಈ ಶತಮಾನದ ಆದಿಯವರೆಗೂ ಅದೊಂದು ಭಯಾನಕ ಪಿಡುಗಾಗಿತ್ತು. ಹೆರಿಗೆಯಾದ ೩–೪ ದಿನಗಳಲ್ಲಿ ಬಾಣಂತಿಯರಿಗೆ ಮೈ ಕೈ ಊದಿಕೊಂಡು

ವಿಪರೀತ ಜ್ವರ ಬರುತ್ತಿತ್ತು. ಮುಂದೆ ಬುದ್ಧಿಭ್ರಮಣೆಯಿಂದ ಹುಚ್ಚು ಹಿಡಿದಂತಾಗಿ ೧೦–೧೨ ದಿನಗಳಲ್ಲಿ ಹೆಚ್ಚಿನ ಜನ ಸಾಯುತ್ತಿದ್ದರು.

ವಿದ್ಯಾರ್ಥಿಯಾಗಿದ್ದಾಗಲೇ ಸೆಮ್ಮೆಲ್ವೀಸ್‌ಗೆ ಈ ಪಿಡುಗಿನ ಪರಿಚಯ ಸಾಕಷ್ಟಿತ್ತು. ಇದರಿಂದ ಅವನು ಸಾಕಷ್ಟು ಯೋಚಿಸುವಂತಾಗಿತ್ತು. ಈಗ ವೈದ್ಯನಾಗಿ ಆ ವಿಭಾಗದಲ್ಲಿ ಹಗಲು–ರಾತ್ರಿ ಕಾರ್ಯಶೀಲನಾದಮೇಲೆ ಅದರ ಪ್ರತ್ಯಕ್ಷ ಪರಿಚಯದ ಅವಕಾಶ—ಆರೋಗ್ಯ ಸ್ಥಿತಿಯಲ್ಲಿದ್ದ ತುಂಬು ಯೌವ್ವನದ ಗರ್ಭಿಣಿ ತನಗೆ ಜನಿಸಬಹುದಾದ ಸುಂದರ ಕೂಸಿನ ಹೊಂಗನಸು ಕಾಣುತ್ತಾ ಆಸ್ಪತ್ರೆ ಸೇರುವುದು, ಹೆರಿಗೆಯ ನಂತರ ಈ ವಿಚಿತ್ರ ಕಾಯಿಲೆಗೆ ಬಲಿಯಾಗುವುದು ; ತಬ್ಬಲಿ ಕೂಸಿನ ಮತ್ತು ಆಪ್ತರ ಆರ್ತನಾದ—ಸೂಕ್ಷ್ಮಮತಿಯಾದ ಸೆಮ್ಮೆಲ್ವೀಸ್‌ನ ಮನಸ್ಸಿನಲ್ಲಿ ಪರಿಣಾಮ ಬೀರದಿರಲಿಲ್ಲ. ಈ ದೃಶ್ಯಗಳೂ ಹಗಲಿರುಳೂ ಅವನನ್ನು ಕಾಡಹತ್ತಿದವು. ಕನಸಿನಲ್ಲಿಯೂ ಅವೇ ಬರತೊಡಗಿದವು. ಬರುಬರುತ್ತಾ ಅವನ ಮನಃಶಾಂತಿ ಕದಡಿತು. ಬಾಣಂತಿ ಜ್ವರದ ಸಮಸ್ಯೆಗೆ ವೈದ್ಯಲೋಕದ ಜಡತೆ ಅವನಲ್ಲಿ ಜಿಗುಪ್ಸೆಯನ್ನುಂಟುಮಾಡಿತು. ಸಮಸ್ಯೆಯ ಪರಿಹಾರಕ್ಕೆ ಕಾರಣಗಳನ್ನು ಹುಡುಕಲು ಪ್ರಯತ್ನಿಸಲು ನಿರ್ಧರಿಸಿದ.

ಹೆರಿಗೆ ಆಸ್ಪತ್ರೆಯ ಒಂದನೇ ವಿಭಾಗದ ವಾರ್ಡುಗಳಿಂದ ಸದಾ ದುರ್ನಾತ ಸೂಸುತ್ತಿದ್ದುದು ಮೊದಲು ಸೆಮ್ಮೆಲ್ವೀಸ್‌ನ ಗಮನ ಸೆಳೆಯಿತು. ಅಲ್ಲಿ ಉಪಯೋಗಿಸುತ್ತಿದ್ದ ಬಟ್ಟೆಬರೆಗಳು ಮತ್ತು ಸಲಕರಣೆಗಳೂ ಸಹಾ ತುಂಬಾ ಕೊಳಕಾಗಿರುತ್ತಿದ್ದವು. ಇವುಗಳ ನಿವಾರಣೆ ಪರಿಸ್ಥಿತಿಯನ್ನು ಉತ್ತಮಗೊಳಿಸಬಹುದೆಂಬ ಮಹದಾಶೆಯಿಂದ ನಿರ್ದೇಶಕ ಕ್ಲೈನ್‌ನಲ್ಲಿ ಆ ಬಗ್ಗೆ ಕೆಲವು ಸಲಹೆಗಳನ್ನು ಬಿನ್ನವಿಸಿಕೊಂಡನು.

ಕ್ಲೈನ್ ಇತರರ ಅಭಿಪ್ರಾಯಗಳಿಗೆ ಮನ್ನಣೆ ಕೊಡುವ ಅಭ್ಯಾಸದವನಲ್ಲ. ಜೊತೆಗೆ ಮುಂಗೋಪ ಮತ್ತು ಸ್ವಪ್ರತಿಷ್ಠೆ ಅವನಲ್ಲಿ ತುಂಬಿತುಳುಕಾಡುತ್ತಿದ್ದವು. ಸಹಾಯಕ ವೈದ್ಯ ಸೆಮ್ಮೆಲ್ವೀಸ್ ಆಸ್ಪತ್ರೆಯ ಆಡಳಿತದ ಬಗೆಗೆ ತಲೆ ಹಾಕದೆ ತನ್ನ ಕರ್ತವ್ಯ ನಿರ್ವಹಣೆ ಮಾಡುವುದು ಮಾತ್ರ ಅವನ ಕೆಲಸ ಎಂಬ ಎಚ್ಚರಿಕೆ ದೊರೆಯಿತು !

**ಸಂಶೋಧನೆಗಳ ಆರಂಭ :**

ವಿವಿಧ ಕಾಯಿಲೆಗಳಿಂದ ಸತ್ತವರ ಶವಪರೀಕ್ಷೆ ನಡೆಸಿ, ಅವರ ಸಾವಿಗೆ ಕಾರಣವಾಗಿರಬಹುದಾದ ಅಂಶಗಳನ್ನು ಅಭ್ಯಸಿಸುತ್ತಿದ್ದ ಸೆಮ್ಮೆಲ್ವೀಸ್‌ನ ಗುರು ಕೊಲ್ಲೇಚಟಿಸ್ಕ (*Kollechitska*) ನೊಡನೆ ಬಾಣಂತಿ ಜ್ವರದ ಸಮಸ್ಯೆ ಒಮ್ಮೆ ಚರ್ಚಿಸಿದಾಗ, ಹಾಗೆ ಸತ್ತವರ ಶವಪರೀಕ್ಷೆ ಕೈಗೊಳ್ಳು ವಂತೆ ಸಲಹೆ ಬಂತು. ಶವಪರೀಕ್ಷಾ ವಿಧಾನ ಆಗ ತಾನೆ ಬಳಕೆಗೆ ಬರು ತ್ತಿದ್ದು ಬಾಣಂತಿ ಜ್ವರದಿಂದ ಸತ್ತವರ ಪರೀಕ್ಷೆ ಅಲ್ಲಿಯುವರೆಗೆ ನಡೆಯದೆ ಆದರಿಂದಾಗುವ ವ್ಯತ್ಯಾಸಗಳ ಬಗೆಗೆ ಇನ್ನೂ ಮಾಹಿತಿಗಳಿರಲಿಲ್ಲ.

ಮುಂದೆ ತನಗೆ ಬಿಡುವಿದ್ದಾಗಲೆಲ್ಲಾ ಸೆಮ್ಮೆಲ್ವೀಸ್ ಶವಾಗಾರಕ್ಕೆ ತೆರಳಿ ಬಾಣಂತಿ ಜ್ವರದಿಂದ ಸತ್ತವರ ಶವಪರೀಕ್ಷೆಗಾರಂಭಿಸಿದ. ಅವರ ಶರೀರದಲ್ಲಿ ಸಾಮಾನ್ಯವಾಗಿ ಕೀವು ತುಂಬಿದ ಗುಳ್ಳೆಗಳು, ಅಂಗಾಂಗ ಗಳಲ್ಲೂ ಕೀವುಗಟ್ಟಿದ ಬಾವುಗಳು, ಗರ್ಭಕೋಶ ಮತ್ತು ಜನನೇಂದ್ರಿಯ ಗಳಲ್ಲೂ, ಕೀವಾದ ಗಾಯಗಳು, ಎದೆಗೂಡು ಮತ್ತು ಹೊಟ್ಟೆಯಲ್ಲಿ ತಿಳಿ ಯಾದ ಕೀವಿನಂತಹ ದ್ರವ ಇರುವುದು ಕಂಡುಬರುತ್ತಿತ್ತು. ಕೊಲ್ಲೇಚಟಿ ಸ್ಕನು ಈ ಬದಲಾವಣೆಗಳನ್ನು ವೀಕ್ಷಿಸಿ, ನಂಜಿನ ಜ್ವರದಿಂದ(*Septicaemia*) ಸತ್ತವರ ಶರೀರದಲ್ಲೂ ಇಂತಹ ಬದಲಾವಣೆಗಳಿರುತ್ತಿದ್ದುದನ್ನು ಅವನ ಗಮನಕ್ಕೆ ತಂದಿದ್ದನು. ಈ ಎರಡೂ ಸ್ಥಿತಿಗಳು ಒಂದೇ ಇರ ಬಹುದೇ ಎಂಬ ಅನುಮಾನ ಅವನ ಮನಸ್ಸಿನಲ್ಲಾಯಿತು.

ಆಸ್ಪತ್ರೆಯ ಎರಡು ವಿಭಾಗಗಳಲ್ಲಿ ಬಾಣಂತಿ ಜ್ವರದಿಂದ ಸತ್ತವರ ದಾಖಲೆ ಪತ್ರಗಳ ಪರಿಶೀಲನೆ ಸೆಮ್ಮೆಲ್ವೀಸನ ಮುಂದಿನ ಯೋಜನೆ. ಇದ ರಿಂದ ಬಾಣಂತಿ ಜ್ವರದಿಂದ ಒಂದನೇ ವಿಭಾಗದಲ್ಲಿ ಸಾಯುತ್ತಿದ್ದವರ ಸಂಖ್ಯೆ ಎರಡನೇ ವಿಭಾಗಕ್ಕಿಂತ ಹತ್ತರಷ್ಟು ಜಾಸ್ತಿ ! ಒಂದನೇ ವಿಭಾಗ ತಾನೂ ಸೇರಿ ದಂತೆ ಇತರ ನುರಿತ ವೈದ್ಯರಿಂದ ನಿರ್ವಹಣೆಯಾದರೆ, ಎರಡನೇ ವಿಭಾಗ ಹೆಚ್ಚು ಪರಿಣಿತರಲ್ಲದ ದಾದಿಯರಿಂದ. ಅದರಿಂದ ಹೆಚ್ಚು ಸಾವಿಗೆ ಕಾರಣ ತಾನು ಮತ್ತು ತನ್ನ ಸಹೋದ್ಯೋಗಿ ವೈದ್ಯರುಗಳೇ ಕಾರಣವಿರಬಹು ದೆಂಬುದು ಅವನ ಅಂತರಾತ್ಮವನ್ನು ಕೆದಕಿತು. ಅವನು ಚಿಂತಾಕ್ರಾಂತನಾಗಿ ಹಗಲಿರಳೂ ಅದನ್ನೇ ಯೋಚಿಸತೊಡಗಿದ. ನಿದ್ದೆ ದೂರವಾಯಿತು.

ಸೆಮ್ಮೆಲ್ವೀಸ್ ಕ್ರಮೇಣ ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಂಡವನಂತಾದ. ಬಾಹ್ಯ ನಡೆವಳಿಕೆಗಳಲ್ಲೂ ಅವನಿಗೆ ಮನೋರೋಗ ಹಿಡಿದಿರುವ ಅನುಮಾನ ಸಹೋದ್ಯೋಗಿಗಳಿಗೂ ತಿಳಿಯುವಂತಾಯಿತು. ಹಿತೈಷಿ ಕೊಲ್ಲೇಚಟಿಸ್ಕ ಮತ್ತು ಸ್ನೇಹಿತರು, ಅವನು ಕೆಲವು ಕಾಲ ಆಸ್ಪತ್ರೆಯ ವಾತಾವರಣದಿಂದ ದೂರವಿರುವುದು ಒಳ್ಳೆಯದೆಂದು ಯೋಚಿಸಿದರು. ಅವರೆಲ್ಲರ ಒತ್ತಾಯಕ್ಕೆ ಮಣಿದು ಒಬ್ಬ ಸ್ನೇಹಿತನೊಡಗೂಡಿ ಯುರೋಪಿನ ಪ್ರೇಕ್ಷಣೀಯ ಸ್ಥಳಗಳಿಗೂ, ಗಿರಿಧಾಮಗಳಿಗೂ ತಿರುಗಾಡಿ ವಿಶ್ರಾಂತಿ ಪಡೆಯಲು ಹೊರಟ. ಆದರೆ ಹೋದ ಕಡೆಯಲ್ಲೆಲ್ಲಾ ಆಸ್ಪತ್ರೆ ಮತ್ತು ಬಾಣಂತಿ ಜ್ವರದಿಂದ ಸಾಯುತ್ತಿದ್ದ ತಾಯಂದಿರ ಚಿಂತೆ ಅವನ ಬೆಂಬಿಡಲಿಲ್ಲ. ಅದೊಂದು ಯಾಂತ್ರಿಕ ತಿರುಗಾಟವಾಯಿತೇ ಹೊರತು ಮನಃಶ್ಯಾಂತಿಯನ್ನು ಒದಗಿಸಲಾಗಲಿಲ್ಲ.

**ಅನಿರೀಕ್ಷಿತ ತಿರುವು :**

ಸೆಮ್ಮೆಲ್ವೀಸ್ ರಜೆಯಿಂದ ಹಿಂದಿರುಗಿದಾಗ ತನ್ನ ಗುರು ಕೊಲ್ಲೇಚಟಿಸ್ಕನ ಮರಣದ ದಾರುಣ ವಾರ್ತೆ ಕಾದಿತ್ತು. ಶವಪರೀಕ್ಷೆಯ ಸಮಯದಲ್ಲಿ ಅವನ ಬೆರಳಲ್ಲಾದ ಗಾಯದಿಂದ ನಂಜೇರಿ ಸತ್ತನೆಂಬ ವಿಷಯವನ್ನು ಅವನಿಗೆ ತಿಳಿಸಿದ ಕ್ಲೈನ್, ಪದೇ ಪದೇ ಶವಪರೀಕ್ಷೆ ಮಾಡುವ ಸೆಮ್ಮೆಲ್ವೀಸ್‌ನಿಗೂ ಅಂತಹ ಪರಿಸ್ಥಿತಿಯಾಗಬಹುದೆಂಬ ಮೂದಲಿಕೆ ಬೇರೆ. ಸೆಮ್ಮೆಲ್ವೀಸ್ ಈ ದುರಂತಕ್ಕಾಗಿ ಮಮ್ಮಲ ಮರುಗಿದ. ಮಾನಸಿಕ ಶಾಂತಿ ಇನ್ನೂ ಕದಡಿದರೂ, ಕೊಲ್ಲೇಚಟಿಸ್ಕನ ಕಾಯಿಲೆಯ ವಿವರನ್ನು ತಿಳಿಯಲು ಕುತೂಹಲದಿಂದ ಅವನ ಶವಪರೀಕ್ಷೆಯ ವರದಿಯನ್ನು ಅಭ್ಯಸಿಸಿದ. ಶವಪರೀಕ್ಷೆಯ ಸಮಯದಲ್ಲಿ ವಿದ್ಯಾರ್ಥಿಯೊಬ್ಬನ ಅಚಾತುರ್ಯದಿಂದ ಕೊಲ್ಲೇಚಟಿಸ್ಕನ ಬೆರಳಿಗೆ ಗಾಯ ; ೩–೪ ದಿನಗಳಲ್ಲಿ ವಿಪರೀತ ಜ್ವರ ; ವಾರದೊಳಗೆ ಮೈಯೆಲ್ಲಾ ಬಾತುಕೊಂಡು, ಕೀವುಗಟ್ಟಿದ ಗುಳ್ಳೆಗಳು ; ಕೊನೆಗೆ ಮಾನಸಿಕ ಭ್ರಾಂತಿಯಿಂದ ಸಾವು. ಶರೀರದ ಅಂಗಾಂಗಗಳಲ್ಲಿ ಕೀವುಗಟ್ಟಿರುವುದು, ಎದೆಗೂಡು, ಹೊಟ್ಟೆಯಲ್ಲಿ ಕೀವಿನಂತಹ ದ್ರವ ಶೇಖರಣೆ— ಬಾಣಂತಿ ಜ್ವರದಿಂದ ಸಾಯುತ್ತಿದ್ದವರ ಶವಪರೀಕ್ಷೆಯಲ್ಲಿ ತನಗೆ ಪರಿಚಯ

ವಿದ್ದ ಕುರುಹುಗಳೇ ಇಲ್ಲೂ ಇವೆ, ಗರ್ಭಕೋಶ ಮಾತ್ರ ಇಲ್ಲ—ಇದೊಂದೇ ವ್ಯತ್ಯಾಸ : ಇದೊಂದು ಬಾಣಂತಿ ಜ್ವರದಂತದೇ ಕಾಯಿಲೆಯೆಂಬುದರ ಬಗೆಗೆ ಅವನಿಗೆ ಸಂದೇಹ ಉಳಿಯಲಿಲ್ಲ.

ಕೊಲ್ಲೇಚಟಿಸ್ಕನಿಗೆ ತಗುಲಿದ ಚಾಕುವಿನ ಪರೀಕ್ಷೆಯಿಂದ ಅದರಲ್ಲಿ ರಕ್ತ, ಕೀವು ಮುಂತಾದ ಶವದ ದ್ರವಗಳು ಅಂಟಿಕೊಂಡಿರುವುದು ಕಂಡು ಬಂದಿತು. ಒಂದನೇ ವಿಭಾಗಕ್ಕೆ ಹೆರಿಗೆ ಮಾಡಿಸಲು ಬರುತ್ತಿದ್ದ ವೈದ್ಯರು ಮತ್ತು ವೈದ್ಯವಿದ್ಯಾರ್ಥಿಗಳು ಪ್ರತಿ ದಿನ ಬೆಳಿಗ್ಗೆ ಮಾನವ ಅಂಗರಚನಾ ಶಾಸ್ತ್ರದ ಪ್ರಯೋಗಾಲಯದಲ್ಲಿ ಶವಪರೀಕ್ಷೆ ನಡೆಸಿ ನೇರವಾಗಿ ಬರುತ್ತಿದ್ದರು. ಆಗಿನ ವೈದ್ಯರು ಮತ್ತು ವಿದ್ಯಾರ್ಥಿಗಳು ಕೈತೊಳೆಯುವ ಅಭ್ಯಾಸದವರಲ್ಲ. ಎರಡನೇ ವಿಭಾಗದ ದಾದಿಯರು ಶವಪರೀಕ್ಷೆ ಮಾಡುವ ಪ್ರಮೇಯದವರಲ್ಲ. ಎರಡನೇ ವಿಭಾಗದಲ್ಲಿ ಬಾಣಂತಿ ಜ್ವರದ ಹಾವಳಿ ಕಡಿಮೆ ಇರುವುದಕ್ಕೂ ಈ ವ್ಯತ್ಯಾಸಕ್ಕೂ ಸಂಬಂಧವಿರಬಹುದೇ ಎಂಬುದು ಮುಂದಿನ ಸಮಸ್ಯೆಯಾಯಿತು. ಆಸ್ಪತ್ರೆಯಲ್ಲಿನ ಈ ವ್ಯತ್ಯಾಸ, ಕೊಲ್ಲೇಚಟಿಸ್ಕನ ಮರಣದ ಕಾರಣ ಮತ್ತು ಬಾಣಂತಿ ಜ್ವರದಿಂದ ಸತ್ತವರ ಶವದಲ್ಲಾಗುತ್ತಿದ್ದ ವ್ಯತ್ಯಾಸ—ಇವೆಲ್ಲಕ್ಕೂ ಪರಸ್ಪರ ಹೋಲಿಕೆಯಿರುವುದು ಅವನಿಗೆ ದೃಢಪಟ್ಟಂತಾಯಿತು. ಬಾಣಂತಿಜ್ವರದ ಸಮಸ್ಯೆಗೆ ಪರಿಹಾರವೇ ದೊರೆತಂತಾಯಿತು.

## ನಿವಾರಣೆಯೆತ್ತ ಪ್ರಯೋಗಗಳು :

ಆಸ್ಪತ್ರೆಯ ಒಂದನೇ ವಿಭಾಗದಲ್ಲಿ ಹೆರಿಗೆ ಮಾಡಿಸಲು ಬರುವ ವೈದ್ಯರು ಮತ್ತು ವಿದ್ಯಾರ್ಥಿಗಳ ಕೈಗಳಲ್ಲಿರಬಹುದಾದ ಶವದ ದ್ರವವನ್ನು ತೆಗೆಯುವ ಉಪಾಯವನ್ನು ಕಂಡುಹಿಡಿಯುವುದು ಸೆಮ್ಮೆಲ್ವೀಸ್‌ನ ಮುಂದಿನ ಯೋಜನೆ. ಸಾಬೂನು ಮತ್ತು ಬಿಸಿನೀರಿನಿಂದ ಕೈತೊಳೆಯುವುದರಿಂದ ದ್ರವ ಹೋಗಬಹುದೆಂದು ತೀರ್ಮಾನಿಸಿ ಆ ಬಗ್ಗೆ ತನ್ನ ವಿಭಾಗದಲ್ಲಿ ಆ ಏರ್ಪಾಡು ಮಾಡಿದನು. ಬೆಳಿಗ್ಗೆ ವೈದ್ಯರು ಮತ್ತು ದ್ಯಾರ್ಥಿಗಳು ಅಲ್ಲಿಗೆ ಬರುವ ಮೊದಲೇ ಸಾಬೂನು ಮತ್ತು ಬಿಸಿನೀರನ್ನು ಹೆರಿಗೆ ಕೊಠಡಿಯ ಬಾಗಿಲಲ್ಲಿ ಇರಿಸಿದನು. ಅದನ್ನು ಉಪಯೋಗಿಸುವ

ರೀತಿ ಮತ್ತು ಅದರಿಂದಾಗುವ ಪರಿಣಾಮಗಳ ಬಗೆಗೆ ಸೂಚನಾಪತ್ರ ವೊಂದನ್ನು ಬಾಗಿಲಲ್ಲೇ ಅಂಟಿಸಿದ್ದ. ಬಾಣಂತಿ ಜ್ವರದ ಬಗೆಗೆ ತನ್ನ ಅನಿಸಿಕೆಗಳನ್ನು ವಿವರಿಸಿ, ಆ ಬಗ್ಗೆ ತಾನು ಮಾಡಿರುವ ಏರ್ಪಾಡುಗಳ ವರದಿಯೊಂದನ್ನು ಆಸ್ಪತ್ರೆಯ ನಿರ್ದೇಶಕ ಕ್ಲೈನ್‌ನ ಮೇಜಿನ ಮೇಲೂ ಇರಿಸಿದ್ದ. ಆ ವಿಭಾಗದಲ್ಲಿದ್ದ ಗರ್ಭಿಣಿಯರನ್ನೆಲ್ಲಾ ಸಂತೈಸಿ, ಅವರಾರಿಗೂ ಮುಂದೆ ಕೆಡುಕಾಗದಂತಹ ಏರ್ಪಾಡು ಮಾಡಿರುವುದಾಗಿ ಭರವಸೆ ಇತ್ತ.

ಆ ದಿನ ವಿದ್ಯಾರ್ಥಿಗಳ ತಂಡ ಬಂದೊಡನೆ ಅವರನ್ನೆಲ್ಲಾ ಬಾಗಿಲಲ್ಲಿ ತಡೆದು ತಾನು ಮಾಡಿರುವ ಏರ್ಪಾಡನ್ನು ವಿವರಿಸಿ, ಅವರೆಲ್ಲಾ ಅವನು ಹೇಳಿದಂತೆ ಅನುಸರಿಸಬೇಕೆಂದು ವಿನಂತಿಸಿದ.

ಸೆಮ್ಮೆಲ್ವೀಸ್‌ನ ವಿಚಾರಸರಣಿ ಅವರಿಗೆಲ್ಲಾ ವಿಚಿತ್ರವೆನಿಸಿತು. ಕೆಲವರು ನಕ್ಕರೆ, ಮತ್ತೆ ಕೆಲವರು ಸಿಟ್ಟಾದರು. ಆ ತನಕ ಯಾವ ಪುಸ್ತಕ ದಲ್ಲೂ ಇಂತಹ ವಿಚಾರ ಬರೆದಿಲ್ಲ. ಅವರ ಗುರುಗಳೂ ಈ ವಿಷಯ ಬೋಧಿಸಿಲ್ಲ. ದಾದಿಯರಿಗೂ ಕೈತೊಳೆಯುವ ನಿರ್ಬಂಧವಿಲ್ಲ ; ವೈದ್ಯರಿಗೆ ಅಂತಹ ನಿರ್ಬಂಧ ವಿಧಿಸುವುದು ಅವಮಾನಕರವೆಂಬುದು ಅವರೆಲ್ಲರ ವಾದ. ಸೆಮ್ಮೆಲ್ವೀಸ್ ತನ್ನ ಸಹನೆಯನ್ನು ಕಳೆದುಕೊಳ್ಳದೆ ಬಾಣಂತಿ ಜ್ವರದ ಬಗೆಗೆ ತಾನು ನಡೆಸಿದ ಸಂಶೋಧನೆಗಳನ್ನು ಮತ್ತೆ ವಿವರಿಸಿದನಲ್ಲದೆ, ಹಾಗೆ ಕೈ ತೊಳೆಯದವರನ್ನು ಹೆರಿಗೆ ಕೊಠಡಿಗೆ ಸೇರಿಸುವುದಿಲ್ಲವೆಂದು ಬೆದರಿಕೆ ಹಾಕಿ ದನು. ವಿದ್ಯಾರ್ಥಿಗಳು ಬೇರೆ ಉಪಾಯವಿಲ್ಲದೆ ಅವನ ಆಜ್ಞೆಯನ್ನು ಪಾಲಿಸಿದರು.

ಆಸ್ಪತ್ರೆಯ ನಿರ್ದೇಶಕ ಕ್ಲೈನ್‌ನನ್ನೇ ತನ್ನ ವಿಚಾರ ಸರಣಿಗೆ ಒಪ್ಪಿ ಸುವುದು ಮುಂದಿನ ಕೆಲಸ. ಕ್ಲೈನ್ ಸಂಪ್ರದಾಯ ಶರಣ ಮತ್ತು ಹಠ ಮಾರಿತನಕ್ಕೆ ಹೆಸರುವಾಸಿಯಾದವನು. ಮರುದಿನ ಹೆರಿಗೆ ಕೊಠಡಿಗೆ ಬಂದಾಗ ಸೆಮ್ಮೆಲ್ವೀಸ್ ತನ್ನ ಹೊಸ ಏರ್ಪಾಡುಗಳನ್ನು ವಿವರಿಸಿ ಅದರಂತೆ ಕೈತೊಳೆಯಬೇಕೆಂದು ವಿನಂತಿಸಿದ. ಅವನ ಅಪ್ಪಣೆ ಪಡೆಯದೆ ಆ ವಿಭಾಗ ದಲ್ಲಿ ಸುಧಾರಣೆಯನ್ನು ಜಾರಿಗೆ ತಂದದ್ದು ಅವನಿಗೆ ಹಿಡಿಸಲಿಲ್ಲ. ಅವನೂ ವಿದ್ಯಾರ್ಥಿಗಳಂತೆ ಮೊದಲು ಕೈತೊಳೆಯಲು ನಿರಾಕರಿಸಿ, ಸೆಮ್ಮೆ ಲ್ವೀಸ್‌ನನ್ನು ತರಾಟೆಗೆ ತೆಗೆದುಕೊಂಡ. ಸೆಮ್ಮೆಲ್ವೀಸ್ ಮೊದಲು ನಿರಾಶೆ

ಗೊಂಡರೂ, ಮತ್ತೊಮ್ಮೆ ತನ್ನ ವಿಚಾರ ಸರಣಿಯನ್ನು ವಿಶದವಾಗಿ ತಿಳಿಸಿ, ಬಾಣಂತಿ ಜ್ವರದ ಬಗೆಗೆ ತನ್ನ ಸಿದ್ಧಾಂತ ಸರಿಯಾದದ್ದೆಂದು ವಿಜ್ಞಾಪಿಸಿದನಲ್ಲದೇ ಧೈರ್ಯದಿಂದ ಕ್ಲೈನ್ ಕೈತೊಳೆಯದೆ ಆ ದಿನ ಗರ್ಭಿಣಿ ಯರನ್ನು ಪರೀಕ್ಷಿಸಿ, ಅವರಲ್ಲಾರಿಗಾದರೂ ಬಾಣಂತಿ ಜ್ವರ ಬಂದರೆ ಅವನೇ ಹೊಣೆಯಾಗಬೇಕಾಗುತ್ತದೆಂದೂ ಉಸುರಿದ. ಕೈತೊಳೆಯುವಂತಹ ಸರಳ ವಿಧಾನದಿಂದ ತಾಯಂದಿರ ಸಾವು ನಿಲ್ಲುವುದಲ್ಲದೇ, ಅದರಿಂದ ಅವನ ಆಸ್ಪತ್ರೆಗೇ ಒಳ್ಳೆಯ ಹೆಸರೂ ಬರುತ್ತದೆಂದು ನಿವೇದಿಸಿದ. ತನ್ನ ಬೆದರಿಕೆಗೆ ಬಗ್ಗದೇ ದೃಢವಾಗಿದ್ದ ಸೆಮ್ಮೆಲ್ವೀಸ್‌ನನ್ನು ಎದುರಿಸುವ ಮನಸ್ಸು ಮಾಡಲು ಕ್ಲೈನ್‌ಗೆ ಏಕೋ ಸಂಕೋಚವಾಯಿತು. ಕೈ ತೊಳೆದೇ ಹೆರಿಗೆ ಕೊಠಡಿಗೆ ಪ್ರವೇಶಿಸಿದ !

ಹೆರಿಗೆ ಕೊಠಡಿಯಲ್ಲಿನ ಸುಧಾರಣೆಗಳು ಪ್ರಾರಂಭವಾದದ್ದು ೧೮೪೭ ಮಾರ್ಚ್ ತಿಂಗಳ ಅಂತ್ಯದಲ್ಲಿ. ಅವನ ಸುಧಾರಣೆಗೆ ಎಲ್ಲಾ ಸಿಬ್ಬಂದಿ ವರ್ಗದವರಿಂದಲೂ ವಿರೋಧವಿದ್ದುದರಿಂದ ಅವುಗಳ ಕಟ್ಟುನಿಟ್ಟಾದ ಪಾಲನೆ ಅವನ ಸ್ವಂತ ಜವಾಬ್ದಾರಿಯಾಯಿತು.

ಸುಧಾರಣೆಗಳ ಜಾರಿಗೆ ಮುನ್ನ ಆ ವಿಭಾಗದಲ್ಲಿ ಬಾಣಂತಿ ಜ್ವರದಿಂದ ಸಾಯುತ್ತಿದ್ದವರ ಪ್ರಮಾಣ ಶೇಕಡ ೧೮.೨೭ ಆಗಿದ್ದುದು ಕೈತೊಳೆಯುವ ಪದ್ಧತಿ ಜಾರಿಗೆ ಬಂದ ಎರಡು ತಿಂಗಳಲ್ಲಿ ಶೇಕಡ ೧೨.೨೪ಕ್ಕೆ ಇಳಿಯಿತು. ಇಳಿತ ಗಮನಾರ್ಹವಲ್ಲ ಮತ್ತು ಎರಡನೇ ವಿಭಾಗದಕ್ಕಿಂತಲೂ ಕಡಿಮೆ ಯಾಗಿಯೂ ಇರಲಿಲ್ಲ. ಸೆಮ್ಮೆಲ್ವೀಸ್‌ಗೆ ತೃಪ್ತಿಯೂ ಆಗಲಿಲ್ಲ.

ಸಾಬೂನು ಮತ್ತು ಬಿಸಿನೀರಿನಿಂದ ಕೈ ತೊಳೆದ ಮೇಲೂ ಕೈಗಳಲ್ಲಿ ದುರ್ಗಂಧವಿದ್ದೇ ಇರುತ್ತಿದ್ದುದನ್ನು ಅವನು ಗಮನಿಸದಿರಲಿಲ್ಲ. ಅದರಿಂದ ಶವದ ದ್ರವ ಪೂರ್ತಿ ಹೋಗಿಲ್ಲವೆಂಬುದು ಅವನ ಭಾವನೆ. ಅದನ್ನು ಪೂರ್ತಿಯಾಗಿ ತೆಗೆಯುವ ಬಗ್ಗೆ ಮತ್ತೆ ಯೋಚಿಸಿದ.

ಕ್ಲೋರಿನ್ ದ್ರಾವಕದಿಂದ ಕೈತೊಳೆದರೆ ಕೈಗಂಟದ ಶವದ ದ್ರವ ಮಾಯವಾಗುತ್ತದೆಂದು ಹಿಂದೆ ಉಪಾಧ್ಯಾಯರೊಬ್ಬರು ಬೋಧಿಸಿದ್ದು ಈಗ ಸ್ಮೃತಿಪಟಲದಿಂದ ಹೊರಬಂತು. ಮರುದಿನವೇ ಅದರಲ್ಲಿ ಕೈತೊಳೆ ಯುವ ಏರ್ಪಾಡು ಮಾಡಿದ. ಮತ್ತೆ ಕೆಲವರಿಂದ ಪ್ರತಿಭಟನೆಯಿತ್ತಾ

ದರೂ, ಸೆಮ್ಮೆಲ್ವೀಸ್‌ನ ನಿಸ್ವಾರ್ಥ ಮನೋಭಾವವನ್ನರಿತ ಅವರೆಲ್ಲಾ ಸಹಕರಿಸಿದರು.

ಸೆಮ್ಮೆಲ್ವೀಸ್ ಜೂನ್ ಅಂತ್ಯದಲ್ಲಿ ಬಾಣಂತಿ ಜ್ವರದಿಂದ ಸತ್ತವರ ಪ್ರಮಾಣ ತಾಳೆ ನೋಡಿದಾಗ ಅದು ೨.೩೮ಕ್ಕೆ ಇಳಿದಿತ್ತು ! ಅದೇ ಮೊದಲ ಬಾರಿಗೆ ಅವನ ಮುಖದಲ್ಲಿ ನಗೆ ಮೂಡಿತ್ತು ! ಹೆರಿಗೆ ಕೊಠಡಿಯಲ್ಲೂ ಹಿಂದಿನ ಸಾವು-ನೋವಿನ ರೋಧನ ಕಡಿಮೆಯಾಗಿ ಶಾಂತಿ ನೆಲೆಸಿತ್ತು. ಸೆಮ್ಮೆಲ್ವೀಸ್ ಅವರೆಲ್ಲರ ಆರಾಧ್ಯ ದೇವರಾದ.

ಸೆಮ್ಮೆಲ್ವೀಸ್ ಹಾಜರು ಪಡಿಸಿದ ಅಂಕಿ ಅಂಶಗಳು ಕ್ಲೈನ್‌ಗೆ ಹಿಡಿಸಲಿಲ್ಲ. ಅವನ ಜಡಹೃದಯ ಕರಗಲಿಲ್ಲ. ವಾಸ್ತವಿಕತೆಗೆ ತಲೆಬಾಗಲಿಲ್ಲ. ಕ್ಲೋರಿನ್ ದ್ರಾವಕವನ್ನು ಬಳಸಲಾರಂಭಿಸಿದಾಗಿನ ಆಸ್ಪತ್ರೆಯ ಖರ್ಚು ಜಾಸ್ತಿಯಾಗಿದೆಯೆಂದು, ಅದನ್ನು ಕೂಡಲೇ ನಿಲ್ಲಿಸಬೇಕೆಂದು ಆಜ್ಞಾಪಿಸಿದರೂ, ಅವನ ಸ್ವಭಾವವನ್ನು ಅರಿತಿದ್ದ ಸೆಮ್ಮೆಲ್ವೀಸ್ ಮರುಮಾತಾಡಲಿಲ್ಲ. ಬದಲಿಗೆ ಕಡಿಮೆ ಖರ್ಚಿನ ದ್ರಾವಕವೊಂದರ ಸಂಶೋಧನೆಗೆ ಕೈ ಹಾಕಿದ.

ರಸಾಯನಶಾಸ್ತ್ರ ಪ್ರಾಧ್ಯಾಪಕ ಸ್ಕೋಡ (*Skoda*) ನನ್ನು ಇದಕ್ಕಾಗಿ ಮರೆಹೊಕ್ಕ. ವಿಷಯದ ಅರಿವಿಲ್ಲದ ಸ್ಕೋಡ ತನ್ನ ವಿಭಾಗದ ಪುಸ್ತಕ ಭಂಡಾರವನ್ನೇ ಅವನಿಗೆ ವಹಿಸಿ ಆ ಬಗ್ಗೆ ಅಭ್ಯಸಿಸುವಂತೆ ಮಾಡಿದ. ಅಲ್ಲಿನ ಅಭ್ಯಾಸದ ಪರಿಣಾಮವಾಗಿ ತನ್ನ ಉದ್ದೇಶ ಸಾಧನೆಗೆ ನೆರವಾಗಬಲ್ಲ ಹಲವಾರು ರಸಾಯನಿಕಗಳನ್ನು ಪಟ್ಟಿಮಾಡಿ, ಅವನ್ನೆಲ್ಲಾ ಕೊಂಡು ತಂದನು. ಆ ದಿನ ರಾತ್ರಿಯೇ ಶವಾಗಾರಕ್ಕೆ ಹೋಗಿ ತನ್ನ ಪ್ರಯೋಗಗಳನ್ನು ಆರಂಭಿಸಿದ. ಅವುಗಳ ಹಲವಾರು ಪ್ರಮಾಣಗಳ ದ್ರಾವಕಗಳನ್ನು ತಯಾರಿಸಿಟ್ಟುಕೊಂಡು, ತನ್ನ ಕೈಗಳನ್ನೇ ಹಲವಾರು ಶವಗಳೊಳಗೆ ಅದ್ದಿ ಈ ಮಿಶ್ರಣಗಳಿಂದ ತೊಳೆದು ಫಲಿತಾಂಶ ಟಿಪ್ಪಣಿ ಮಾಡಿದನು. ಕ್ಲೋರಿನೇಟೆಡ್ ಲೈಮ್ (*Chlorinated Lime*) ದ್ರಾವಕದಲ್ಲಿ ದುರ್ಗಂಧ ಮಾಯವಾಗುತ್ತದೆಂಬುದನ್ನು ಕಂಡುಹಿಡಿಯಲು ಬೆಳಗಿನ ಜಾವವೇ ಆಯಿತು. ತಯಾರಿ ಖರ್ಚು ಮೊದಲಿನ ದ್ರಾವಕದ ಕೇವಲ ಕಾಲು ಭಾಗ ಮಾತ್ರ !

ಕ್ಲೋರಿನೇಟೆಡ್ ಲೈಮ್‌ನ ಪ್ರಯೋಗ ಮರುದಿನದಿಂದಲೇ ಆರಂಭ. ನಿರ್ದೇಶಕ ಕ್ಲೈನ್‌ಗೆ ಈ ಬಗ್ಗೆ ವರದಿ ಮಾಡಿದ. ಇದರ ಪ್ರಯೋಗವಾದ ಒಂದು ತಿಂಗಳ ನಂತರ ಮತ್ತೆ ಅಂಕಿ ಅಂಶಗಳ ಪರಿಶೀಲನೆ. ಸಾವಿನ ಪ್ರಮಾಣ ಶೇ. ೨.೩೮ ರಿಂದ ೧.೩೦ ಕ್ಕೆ ಇಳಿಮುಖ !

ವಿಯನ್ನಾದ ಹೆರಿಗೆ ಆಸ್ಪತ್ರೆಯಲ್ಲಿ ನಡೆದ ಈ ಅದ್ಭುತದ ಸುದ್ದಿ ವಿಶ್ವವಿದ್ಯಾಲಯದ ಮೂಲೆ ಮೂಲೆಗೂ ಹರಡಿತು. ಸ್ನೇಹಿತರು, ಗುರುಗಳು ಹಾಗೂ ವಿಜ್ಞಾನಿಗಳು ಸೆಮ್ಮೆಲ್ವೀಸ್‌ನನ್ನು ಮುಕ್ತಕಂಠದಿಂದ ಹೊಗಳಿ ಅಭಿನಂದಿಸಿದರು. ರೋಕಿಟಾನ್ಸಕಿ, ಸ್ಕೋಡ, ಹೀಬ್ರ, ಹ್ಯಾಲರ್ ಮೊದಲಾದ ಗುರುಗಳೇ ಅವನ ವಿಚಾರಧಾರೆಯ ಪ್ರಚಾರಕ್ಕೆ ಮುಂದಾದರು. ಆದರೆ ನಿರ್ದೇಶಕ ಕ್ಲೈನ್‌ನ ಅದ್ಭುತ ಬುದ್ಧಿಶಕ್ತಿ ಈ ಫಲಿತಾಂಶಗಳನ್ನು ನಂಬಲಿಲ್ಲ ! ಅವು ಕೇವಲ ಆಕಸ್ಮಿಕ ಘಟನೆಗಳೆಂದು ಅಲ್ಲಗಳೆದ. ಕಣ್ಣಿದ್ದೂ ಕುರುಡನಾದ. ಅವನ ಧೋರಣೆ ಎಲ್ಲರನ್ನೂ ಚಕಿತಗೊಳಿಸಿತು. ಸೆಮ್ಮೆಲ್ವೀಸ್ ನಿರಾಶನಾದ.

**ನಿರಾಶೆ :**

ಬಾಣಂತಿ ಜ್ವರದಿಂದ ಆಗಸ್ಟ್‌ನಲ್ಲಿ ಶೇ. ೧.೨೦ ಇದ್ದದ್ದು ಸೆಪ್ಟಂಬರ್‌ನಲ್ಲಿ ೧.೮೯ ಕ್ಕೆ ಏರಿತು, ಸೆಪ್ಟಂಬರ್‌ನಲ್ಲಿ ೫.೨೫ ಆಯಿತು ! ತನ್ನ ಸಿದ್ಧಾಂತವನ್ನು ಮಣ್ಣುಗೂಡಿಸಲು ಒಳಸಂಚು ನಡೆಯುತ್ತಿದೆಯೆನ್ನುವುದನ್ನು ಅರಿತ ಸೆಮ್ಮೆಲ್ವೀಸ್ ತನ್ನ ಮೇಲ್ವಿಚಾರಣೆಯನ್ನು ಬಿಗಿಗೊಳಿಸಿದ.

ಒಂದು ಮಧ್ಯಾಹ್ನ ಶವಾಗಾರದಿಂದ ಹೆರಿಗೆ ಕೊಠಡಿಗೆ ಬಂದ ಕೆಲವು ವಿದ್ಯಾರ್ಥಿಗಳು ಕೈ ತೊಳೆಯಲೂ ಇಲ್ಲ. ಕ್ಲೋರಿನೇಟೆಡ್ ಲೈಮ್‌ನಲ್ಲಿ ಅದ್ದಲೂ ಇಲ್ಲ. ಸೆಮ್ಮೆಲ್ವೀಸ್ ಮರೆಯಲ್ಲಿದ್ದು ವೀಕ್ಷಿಸಿದ, ಸಿಟ್ಟು ನೆತ್ತಿಗೇರಿತು. ಅವರನ್ನು ತಿಳಿಗೇಡಿಗಳು, ಕೊಲೆಪಾತಕರು ಎಂದು ಅಬ್ಬರಿಸಿ ಕೂಗಾಡಿದ. ತಪ್ಪನ್ನು ಅರಿತ ಕೆಲವು ವಿದ್ಯಾರ್ಥಿಗಳು ತಲೆಬಾಗಿಸಿದರು. ಒಬ್ಬ ವಿದ್ಯಾರ್ಥಿ ತಾನು ಮಾಡಿದ್ದೇ ಸರಿಯೆಂದು ಒರಟಾಗಿ ವಾದಿಸಿದ. ಸೆಮ್ಮೆಲ್ವೀಸ್ ತನ್ನ ಸಹನೆಯನ್ನು ಕಳೆದುಕೊಂಡು ಅಂತಹ ವಿದ್ಯಾರ್ಥಿಯು ವೈದ್ಯನಾಗಲು ಅರ್ಹನಲ್ಲ. ಆದರಿಂದ ಅವನನ್ನು ಹೆರಿಗೆ ಕೊಠಡಿಗೆ ಇನ್ನು

ಸೇರಿಸುವುದಿಲ್ಲವೆಂದು ಹೊರಗಟ್ಟಿದನು. ಬಾಣಂತಿ ಜ್ವರದಿಂದ ನರಳಿ ಅಸು ನೀಗುವುದರಲ್ಲಿದ್ದ ಮಹಿಳೆಯೊಬ್ಬಳನ್ನು ಉಳಿದ ವಿದ್ಯಾರ್ಥಿಗಳಿಗೆ ತೋರಿಸಲು ಅವರ ಮನಸ್ಸು ಕರಗುವಂತಾಯಿತು. ದಾರಿ ತಪ್ಪಿದ ವಿದ್ಯಾರ್ಥಿಗಳನ್ನು ಸರಿಯಾದ ಮಾರ್ಗಕ್ಕೆ ತರಲು ಅದಕ್ಕಿಂತ ಹೆಚ್ಚಿನ ನಿದರ್ಶನ ಬೇಕಾಗಿರಲಿಲ್ಲ.

## ಕ್ಲೈನ್‌ನ ಹಟಮಾರಿತನ :

ಬಾಣಂತಿ ಜ್ವರದಿಂದ ಸಾಯುತ್ತಿದ್ದವರ ಸಂಖ್ಯೆ ಮತ್ತೇ ಇಳಿಮುಖವಾಗಿ ನವೆಂಬರ್ ತಿಂಗಳಲ್ಲಿ ಒಂದನೇ ವಿಭಾಗದಲ್ಲಿ ಅದರಿಂದ ಯಾರೂ ಸಾಯಲಿಲ್ಲ! ಸೆಮ್ಮೆಲ್ವೀಸ್‌ನ ಗುರುಗಳನೇಕರು ಕ್ಲೈನ್‌ನನ್ನು ಭೇಟಿ ಮಾಡಿ ಅವನ ವಿಭಾಗದಲ್ಲಾದ ಅದ್ಭುತ ಸಾಧನೆಗೆ ಅಭಿನಂದಿಸಿದರು. ಅಲ್ಲದೇ ಈ ಮಹತ್ಸಾಧನೆಯನ್ನು ವೈದ್ಯಕೀಯ ಪತ್ರಿಕೆಗಳಲ್ಲಿ ಅವನ ಹೆಸರಿನಿಂದಲೇ ಪ್ರಕಟಿಸುವ ಸಲಹೆ ಮಾಡಿದರು. ಸೆಮ್ಮೆಲ್ವೀಸ್‌ನ ಸಿದ್ಧಾಂತ ಇತರ ವೈದ್ಯರಿಗೂ ಪ್ರಚಾರವಾದರೆ ಅಸಂಖ್ಯಾತ ಮಹಿಳೆಯರಿಗೆ ಜೀವದಾನ ಮಾಡಿದ ಪುಣ್ಯ ಅವನಿಗೆ ಬರುತ್ತದೆಂದು ವಿನಂತಿಸಿದರು. ವಕ್ರಬುದ್ಧಿಯ ಕ್ಲೈನ್ ಈ ಸಾರಿಯೂ ಕಣ್ದೆರೆಯಲಿಲ್ಲ. ಸೆಮ್ಮೆಲ್ವೀಸ್‌ನ ಫಲಿತಾಂಶಗಳು ಕೇವಲ ಕಾಕತಾಳೀಯ, ನಂಬಲರ್ಹವಲ್ಲ, ಅವನಿಗೇ ಕೆಟ್ಟ ಹೆಸರು ತರಲು ಎಲ್ಲರೂ ಸೇರಿ ಮಾಡುತ್ತಿರುವ ಕೃತ್ರಿಮವೆಂದು ಅವರೆಲ್ಲರನ್ನೂ ಮೂದಲಿಸಿದ !

## ಸಂಶೋಧನೆಗಳ ಪ್ರಕಟಣೆ :

ಆಸ್ಪತ್ರೆಯ ನಿರ್ದೇಶಕ ಕ್ಲೈನ್‌ನ ಧೋರಣೆ ಮತ್ತು ಹಟಮಾರಿತನ ಸೆಮ್ಮೆಲ್ವೀಸ್‌ನನ್ನು ಹತಾಶನನ್ನಾಗಿಸಿತು. ಅವನ ಸ್ಥಿತಿಯನ್ನು ಅರಿತ ಹಿತೈಷಿಗಳು, ಅವನ ಸಂಶೋಧನೆಗಳ ಫಲಿತಾಂಶಗಳನ್ನು ವೈದ್ಯಕೀಯ ಪತ್ರಿಕೆಗಳಲ್ಲಿ ಪ್ರಕಟಿಸಲು ನೆರವಾದರು. ವಿಯನ್ನಾ ಮೆಡಿಕಲ್ ಸೊಸೈಟಿಯ ಪತ್ರಿಕೆಯ ಸಂಪಾದಕ ಹೀಬ್ರ ಸೆಮ್ಮೆಲ್ವೀಸ್‌ನ ಸಂಶೋಧನಾ ಫಲಿತಾಂಶಗಳನ್ನೊಳಗೊಂಡ ಲೇಖನವನ್ನು ಬರೆದು ಪ್ರಕಟಿಸಿದ. ರೋಕಿಟಾನ್ಸ್ಕಿ

ಪ್ರೇಗ್ ನಗರದ ಖ್ಯಾತ ಪತ್ರಿಕೆಯೊಂದರಲ್ಲಿ ಸಂಶೋಧನೆಯ ಫಲಿತಾಂಶಗಳು ಪ್ರಕಟವಾಗಲು ಸಹಾಯ ಮಾಡಿದ.

ಈ ಲೇಖನಗಳನ್ನು ಓದಿದ ಹಲವಾರು ವೈದ್ಯರು ತಮ್ಮ ಆಸ್ಪತ್ರೆಗಳಲ್ಲಿ ಆ ನಿಯಮಗಳನ್ನು ಜಾರಿಗೆ ತರಲು ತಯಾರಾದರು. ಆದರೆ ಆ ಕಾಲದ ವೈದ್ಯಲೋಕದ ಪ್ರತಿಭಾವಂತರೆನಿಸಿದವರು ಪ್ರಗತಿ ವಿರೋಧಿಗಳಾಗಿದ್ದು, ಪಟ್ಟಭದ್ರ ಹಿತಾಸಕ್ತಿಗಳ ಗುಲಾಮರಾಗಿದ್ದ ಅನೇಕರು ಸೆಮ್ಮೆಲ್ವೀಸ್‌ನ ತತ್ವಗಳ ಆಚರಣೆಗೆ ಅಡ್ಡಿ ಮಾಡುತ್ತಿದ್ದರು. ಅದರಿಂದ ಅವನು ಪ್ರತಿಪಾದಿಸಿದ ತತ್ವಗಳು ಅವನ ನಿಯಮ ಮತ್ತು ನಿಖರತೆಯಿಂದ ಎಲ್ಲಿಯೂ ಅನುಸರಿಸಲಿಲ್ಲ. ಅರೆಮನಸ್ಸಿನ ಪ್ರತಿಪಾದನೆ, ನಿರೀಕ್ಷಿಸಿದ ಫಲಿತಾಂಶ ನೀಡದೆ ಅವನ ಸಿದ್ಧಾಂತಗಳಿಗೆ ಹೆಚ್ಚಿನ ಪುರಸ್ಕಾರ ದೊರೆಯಲಿಲ್ಲ.

ಸೆಮ್ಮೆಲ್ವೀಸ್‌ನ ಸಿದ್ಧಾಂತಗಳ ಆಚರಣೆಗೆ ತೊಡಕುಗಳಾಗಿ ಮಾನವ ಕಲ್ಯಾಣಕ್ಕೆ ನಾಂದಿಯಾಗಬಹುದಾದ ಸರಳ ಪದ್ಧತಿಯ ಪ್ರತಿಪಾದನೆಗೆ ಅವನ ಹಿತೈಷಿಗಳು ಪ್ರಯತ್ನ ಮುಂದುವರಿಸುತ್ತಲೇ ಇದ್ದರು. ಅವರು ವಿಯನ್ನಾ ವಿಶ್ವವಿದ್ಯಾನಿಲಯದ ಮೆಡಿಕಲ್ ಫ್ಯಾಕಲ್ಟಿಯವರು ಸೆಮ್ಮೆಲ್ವೀಸ್‌ನ ಸಿದ್ಧಾಂತಗಳ ಸತ್ವಪರೀಕ್ಷೆಗೆ ತಜ್ಞರ ಸಮಿತಿಯನ್ನು ನೇಮಿಸುವಂತೆ ಮನವಿ ಮಾಡಿದರು. ಸಮಿತಿ ಪರಿಶೀಲನೆಯಿಂದ ಸೆಮ್ಮೆಲ್ವೀಸ್ ಸಿದ್ಧಾಂತಗಳು ದೃಢಪಟ್ಟರೆ ತನಗೆ ಮುಖಭಂಗವಾಗುತ್ತದೆಂಬ ಅನುಮಾನದಿಂದ ಕ್ಲೈನ್ ಮತ್ತೆ ಕಾರ್ಯಪ್ರವೃತ್ತನಾದ. ಹಂಗೇರಿ ದೇಶಸ್ಥನಾದ ಸೆಮ್ಮೆಲ್ವೀಸ್, ತಮ್ಮ ದೇಶದಲ್ಲಿ ಹಿಂದೆ ನಡೆದ ದಂಗೆಯಲ್ಲಿ ಪರೋಕ್ಷವಾಗಿ ಭಾಗವಹಿಸಿದ್ದನೆಂದು ಸರ್ಕಾರಕ್ಕೆ ಮನವಿ ಮಾಡಿ ವಿಶ್ವವಿದ್ಯಾನಿಲಯದವರು ತಜ್ಞ ಸಮಿತಿಯನ್ನು ನೇಮಿಸುವುದಕ್ಕೆ ತಡೆ ಹಾಕಿದನು. ಆಸ್ಪತ್ರೆಯಲ್ಲಿ ಸೆಮ್ಮೆಲ್ವೀಸ್‌ನ ನೇಮಕದ ಅವಧಿ ಮುಗಿದು ಬಂದಿದ್ದು ಅದೇ ನೆಪದಿಂದ ಅವನನ್ನು ಹುದ್ದೆಯಿಂದ ಮುಂದುವರಿಸಲು ನಿರಾಕರಿಸಿದ. ಆಸ್ಪತ್ರೆಯ ಕಾಗದ ಪತ್ರ ಮತ್ತು ಅಂಕಿ ಅಂಶಗಳನ್ನು ಮುಂದೆ ಅವನ ಬರಹಗಳಲ್ಲಿ ಉಪಯೋಗಿಸಿಕೊಳ್ಳದಂತೆ ತಡೆಯಾಜ್ಞೆಯೂ ಜಾರಿಯಾಯಿತು !

ಸೆಮ್ಮೆಲ್ವೀಸ್‌ಗೆ ಮೇಲಿಂದ ಮೇಲೆ ಆಗುತ್ತಿದ್ದ ಮಾನಸಿಕ ಆಘಾತಗಳ ಜೊತೆಗೆ ಈಗ ಜೀವನೋಪಾಯದ ಉದ್ಯೋಗವೂ ಕಳೆದು ಹೋಯಿತು.

ಆದರೆ ಕೆಲವು ಹಿತೈಷಿಗಳು ಸದಾ ಅವನ ಬೆಂಬಲಕ್ಕಿದ್ದರು. ವಿಯನ್ನಾ ಮೆಡಿಕಲ್ ಸೊಸೈಟಿಯು ಆಶ್ರಯದಲ್ಲಿ ಅವನ ಸಿದ್ಧಾಂತಗಳ ಬಗೆಗೆ ಅವನಿಂದಲೇ ಭಾಷಣ ಏರ್ಪಡಿಸಿದರು. ಅವನಿಂದಲೇ ಲೇಖನಗಳನ್ನು ಬರೆಸಿ ಇನ್ನೂ ಕೆಲವು ಪತ್ರಿಕೆಗಳಲ್ಲಿ ಸಿದ್ಧಾಂತಗಳ ಪ್ರಕಟಣೆಗೆ ನೆರವಾದರು. ಲೇಖನ ಮತ್ತು ಭಾಷಣ ಕಲೆಗಳಲ್ಲಿ ನಿಪುಣನಾಗದ ಸೆಮ್ಮೆಲ್ವೀಸ್ ಈ ಮಾಧ್ಯಮಗಳನ್ನು ಯಶಸ್ವಿಯಾಗಿ ಬಳಸಿಕೊಳ್ಳಲು ವಿಫಲನಾದ.

ಜೀವನೋಪಾಯಕ್ಕೆ ಉದ್ಯೋಗವೂ ಇಲ್ಲದೆ ತನ್ನ ತತ್ವಗಳೂ ಆಚರಣೆಗೆ ಬರದೆ ನಿರಾಶನಾದ ಸೆಮ್ಮೆಲ್ವೀಸ್‌ಗೆ ವಿಯನ್ನಾದಲ್ಲಿ ಜೀವನ ನಡೆಸುವುದೇ ದುಸ್ತರವಾಯಿತು. ಸಂಸಾರ ನಿರ್ವಹಣೆಗೆ ಬೇರೆ ದಾರಿಯಿಲ್ಲದೆ, ಎಂಟು ತಿಂಗಳು ಬಡತನದ ಬೇಗೆಯನ್ನು ಅನುಭವಿಸಿ, ಸೆಮ್ಮೆಲ್ವೀಸ್ ವಿಯನ್ನಾದಿಂದ ಸ್ವದೇಶವಾದ ಬುಡಾಪೆಸ್ಟ್ ನಗರಕ್ಕೆ ಹಿಂದಿರುಗಬೇಕಾಯಿತು.

## ಸ್ವದೇಶದಲ್ಲಿ :

ಬುಡಾಪೆಸ್ಟಿಗೆ ಬರುವಷ್ಟರಲ್ಲಿ ಸೆಮ್ಮೆಲ್ವೀಸ್ ಹೆರಿಗೆ ನಡೆಸುವ ವೃತ್ತಿಯಲ್ಲಿ ನಿರಾಸಕ್ತನಾಗಿದ್ದ. ಕೆಲಕಾಲ ಸಾಮಾನ್ಯ ವೈದ್ಯವೃತ್ತಿಯನ್ನೇ ಮಾಡಿದ. ಕುದುರೆ ಸವಾರಿಯಲ್ಲಿ ಕಾಲು ಮುರಿದು ಕೆಲ ಕಾಲ ಹಾಸಿಗೆ ಹಿಡಿಯ ಬೇಕಾಯಿತು. ಎರಡು ವರ್ಷಗಳ ಕಾಲ ಸೆಮ್ಮೆಲ್ವೀಸ್‌ನ ಸಮಾಚಾರ ಹೊರಗಿನ ಪ್ರಪಂಚಕ್ಕೆ ತಿಳಿಯದಾಯಿತು.

ಸೆಮ್ಮೆಲ್ವೀಸ್ ಒಂದು ಸಾರಿ ಬುಡಾಪೆಸ್ಟ್‌ನ ಸಂತ್‌ರೋಚ್ ಆಸ್ಪತ್ರೆಗೆ ಹೋದಾಗ, ಅಲ್ಲಿನ ಹೆರಿಗೆ ವಿಭಾಗದ ದುಸ್ಥಿತಿ, ಮತ್ತೆ ಹಿಂದಿನ ಅನುಭವ ಮರುಕಳಿಸುವಂತಾಯಿತು. ಅಲ್ಲಿದ್ದ ಆರು ಜನ ಬಾಣಂತಿಯರಲ್ಲಿ ಒಬ್ಬಳು ಆಗ ತಾನೇ ಸತ್ತಿದ್ದಳು, ಒಬ್ಬಳು ಸಾಯುವ ಸ್ಥಿತಿಯಲ್ಲಿದ್ದಳು, ಇನ್ನುಳಿದ ನಾಲ್ವರು ಬಾಣಂತಿ ಜ್ವರದ ಬೇಗೆಯಿಂದ ನರಳುತ್ತಿದ್ದರು ! ಆ ವಿಭಾಗಕ್ಕೆ ಪ್ರತ್ಯೇಕ ವೈದ್ಯರಿರಲಿಲ್ಲ. ಶಸ್ತ್ರಚಿಕಿತ್ಸಾ ವಿಭಾಗದವರೇ ಹೆರಿಗೆ ಡಿಸುತ್ತಿದ್ದುದು. ಹಳೇ ಪೀಳಿಗೆಯ ಅಜ್ಞಾನಿಗಳಾದ ಈ ವೈದ್ಯ ಸಮೂಹಕ್ಕೂ ಶುಚಿತ್ವದ ನಿಯಮಗಳ ಗಂಧವೇ ಇರಲಿಲ್ಲ. ದುರ್ದೈವೀ

ತಾಯಂದಿರ ದಾರುಣ ಸ್ಥಿತಿ ಅವನನ್ನೇ ಮತ್ತೆ ಕಾರ್ಯಪ್ರವೃತ್ತನಾಗುವಂತೆ ಪ್ರೇರೇಪಿಸಿತು.

ಸೆಮ್ಮೆಲ್ವೀಸ್ ತತ್‌ಕ್ಷಣ ಅಲ್ಲಿನ ಹೆರಿಗೆ ವಿಭಾಗದ ಕೆಲಸಕ್ಕೆ ಅರ್ಜಿ ಸಲ್ಲಿಸಿದ. ಆದರೆ ಅವನಿಗೆ ದೊರೆತದ್ದು ಸಂಬಳ ರಹಿತ ಗೌರವ ಪದವಿ ! ಬಾಣಂತಿ ಜ್ವರದ ತಾಯಂದಿರ ಕಷ್ಟಗಳಲ್ಲಿ ಭಾಗಿಯಾಗುವ ಅವಕಾಶ ವಾದರೂ ದೊರೆತದ್ದಕ್ಕಾಗಿ ಅದನ್ನೇ ಸಂತೋಷದಿಂದ ಸ್ವೀಕರಿಸಿ, ಕಾರ್ಯ ತತ್ಪರನಾದ.

ಸಂತ್‌ರೋಚ್ ಆಸ್ಪತ್ರೆಯಲ್ಲಿ ಸೆಮ್ಮೆಲ್ವೀಸ್ ತನ್ನ ಶುಚಿತ್ವದ ನಿಯಮಗಳನ್ನು ಜಾರಿಗೆ ತರಲು ಪ್ರಯತ್ನಿಸಿದಾಗ ಅಲ್ಲಿನ ಸಿಬ್ಬಂದಿ ಗಳಿಂದಲೂ ಸಾಕಷ್ಟು ವಿರೋಧ ವ್ಯಕ್ತಪಟ್ಟಿತು. ಅವನ ಅಂಕಿ ಅಂಶಗಳ ಆಧಾರದಿಂದ ಅವರನ್ನೆಲ್ಲಾ ತನ್ನ ವಿಚಾರಧಾರೆಗೆ ಒಲಿಸಿಕೊಳ್ಳುವುದರಲ್ಲಿ ಅವನಿಗೆ ಈ ಸಾರಿ ಅಷ್ಟೇನೂ ಕಷ್ಟವಾಗಲಿಲ್ಲ.

ಬುಡಾಪೆಸ್ಟಿನ ಆಸ್ಪತ್ರೆಯಲ್ಲಿ ಸೆಮ್ಮೆಲ್ವೀಸ್ ತನ್ನ ತತ್ವಗಳನ್ನು ಆರು ತಿಂಗಳು ನಿರಂತರವಾಗಿ ಆಚರಿಸಿದ್ದರಿಂದ ಅಲ್ಲಿ ಬಾಣಂತಿ ಜ್ವರದಿಂದ ಸಾಯುತ್ತಿದ್ದವರ ಪ್ರಮಾಣ ಶೇಕಡ ಒಂದಕ್ಕಿಂತಲೂ ಕಡಿಮೆಯಾಯಿತು. ಈ ಮಹತ್ಸಾಧನೆಯ ಪರಿಣಾಮದಿಂದ ಬುಡಾಪೆಸ್ಟ್ ವಿಶ್ವವಿದ್ಯಾನಿಲಯ ದವರು ೧೮೫೫ರಲ್ಲಿ ಅವನನ್ನೇ ಪ್ರಸವಶಾಸ್ತ್ರ ವಿಭಾಗದ ಪ್ರಾಧ್ಯಾಪಕನನ್ನಾಗಿ ನೇಮಿಸಿ ಗೌರವಿಸಿದರು. ಮುಂದೆ ಅವನ ಕೀರ್ತಿ ಯೂರೋಪಿನ ಅತ್ಯಂತ ಹೆಸರಾದ ಜೂರಿಕ್ ವಿಶ್ವವಿದ್ಯಾನಿಲಯದವರೆಗೂ ಹರಡಿ ಅಲ್ಲಿಯ ಪ್ರಸವ ಶಾಸ್ತ್ರ ವಿಭಾಗಕ್ಕೆ ಮುಖ್ಯಸ್ಥನಾಗಿ ಬರುವಂತೆ ಆಹ್ವಾನಿಸಿದರು. ಪರದೇಶ ವೊಂದರಲ್ಲಿ ಅನುಭವಿಸಿದ ಕಷ್ಟಗಳ ಅನುಭವವಿದ್ದ ಸೆಮ್ಮೆಲ್ವೀಸ್ ಅದನ್ನು ನಿರಾಕರಿಸಿದ.

ಸೆಮ್ಮೆಲ್ವೀಸ್‌ನ ಸ್ಥಾನಮಾನಗಳು ಉತ್ತಮವಾಗುತ್ತಿದ್ದರೂ, ಅವನ ನೆಚ್ಚಿನ ಸಿದ್ಧಾಂತಗಳನ್ನು ವೈದ್ಯಕೀಯ ಪ್ರಪಂಚ ಬಿಚ್ಚು ಮನಸ್ಸಿನಿಂದ ಒಪ್ಪಿಕೊಳ್ಳದಿದ್ದುದು ಒಂದು ದೊಡ್ಡ ಕೊರತೆಯಾಗಿತ್ತು. ತನ್ನ ತತ್ವಗಳನ್ನು ವಿಶದವಾಗಿ ವಿವರಿಸಲು ತಾನೇ ಒಂದು ಪುಸ್ತಕವನ್ನು ಬರೆದು ವೈದ್ಯಲೋಕದೆದುರು ಇರಿಸಿದ. ಗ್ರಂಥಶೈಲಿ ಮತ್ತು ರಚನಾಕ್ರಮಗಳಲ್ಲಿ

ಅದೊಂದು ಉತ್ತಮ ಕೃತಿಯಾಗಿರದಿದ್ದರೂ, ವೈದ್ಯನೊಬ್ಬನು ಭಯಂಕರ ಕಾಯಿಲೆಯೊಂದರ ಬಗೆಗೆ ರಚಿಸಿದ ಹೃದಯವಿದ್ರಾವಕ ಚಿತ್ರಣವಾಗಿ ಇಂದಿಗೂ ಉಳಿದಿದೆ. ಮುಂದೆ ವೈದ್ಯಕೀಯ ಜಗತ್ತಿನಲ್ಲಾಗಬಹುದಾದ ಮಹಾಕ್ರಾಂತಿಯ ಭವಿಷ್ಯವಾಣಿ ಅದರಲ್ಲಿತ್ತು. ಆದರೆ ಆ ಭವಿಷ್ಯವಾಣಿಯ ಅರ್ಥವನ್ನು ಗ್ರಹಿಸುವ ಸಹೃದಯ ವೈದ್ಯರು ಆಗ ಇರಲಿಲ್ಲ. ನಿಷ್ಠೆಯಿಂದ ಆ ಗ್ರಂಥವನ್ನು ಯಾರೂ ಅಭ್ಯಸಿಸಲಿಲ್ಲ. ಓದಿದವರೂ ತಮ್ಮ ಅಂಧತ್ವ ವನ್ನು ಬಿಡಲು ಸಿದ್ಧರಿರಲಿಲ್ಲ.

**ಹೈಡಲ್‌ಬರ್ಗ್ ಸಮ್ಮೇಳನ :**

ಜರ್ಮನಿಯ ಹೈಡಲ್‌ಬರ್ಗ್‌ನಲ್ಲಿ ೧೮೬೧ರಲ್ಲಿ ವಿಜ್ಞಾನಿಗಳು ಮತ್ತು ವೈದ್ಯರ ಮಹಾಸಮ್ಮೇಳನವೊಂದು ಜರುಗಿತು. ಸೆಮ್ಮೆಲ್ವೀಸ್‌ನ ಗ್ರಂಥ ಮತ್ತು ಅವನ ಸಿದ್ಧಾಂತಗಳ ಬಗೆಗೆ ಅಲ್ಲಿ ವಿಪುಲ ಚರ್ಚೆ ನಡೆಯಿತಾದರೂ ಅಲ್ಲಿ ನೆರೆದಿದ್ದ ವಿಜ್ಞಾನಿಗಳು ಮತ್ತು ವೈದ್ಯರಲ್ಲಿ ಅವನ ಸಿದ್ಧಾಂತಕ್ಕೆ ಬೆಂಬಲ ನೀಡಿದವರು ವಿರಳ. ಹೈಡಲ್‌ಬರ್ಗ್‌ನ ಲಾಂಗ್ (*Longe*) ಎಂಬ ವೈದ್ಯನೊಬ್ಬ ಅವನ ಆಸ್ಪತ್ರೆಯಲ್ಲಿ ಶುಚಿತ್ವದ ನಿಯಮಗಳನ್ನು ಸೆಮ್ಮೆಲ್ವೀಸ್‌ನ ತತ್ವದ ಆಧಾರದಂತೆ ಅನುಸರಿಸಿ ಒಳ್ಳೆಯ ಫಲಿತಾಂಶ ಪಡೆದಿದ್ದ. ಆ ತತ್ವಾಚರಣೆಯ ನಂತರ ಆದ ೩೦೦ ಹೆರಿಗೆಗಳಲ್ಲಿ ಕೇವಲ ಒಬ್ಬಳು ಮಾತ್ರ ಬಾಣಂತಿ ಜ್ವರದಿಂದ ಸತ್ತಿದ್ದಳು !

ಆಗಿನ ವೈದ್ಯಲೋಕದ ಅತ್ಯಂತ ಪ್ರಭಾವಿತ ಮುಂದಾಳೆನಿಸಿದ ವೈದ್ಯ ವಿಜ್ಞಾನಿ ವಿರ್ಕೋವ್ (*Virchow*) ಆ ಸಮ್ಮೇಳನದಲ್ಲಿ ತನ್ನ ಬಾಲ ಬಡುಕರೊಂದಿಗೆ ಉಪಸ್ಥಿತನಿದ್ದ. ಆಗ ತಾನೇ ಅವನು ನಿರೂಪಿಸುತ್ತಿದ್ದ "ರೋಗಗಳ ಕಾರಣ ಶರೀರದಲ್ಲಿರುವ ಸೂಕ್ಷ್ಮಕಣಗಳು" (*Cellur Theory of Diseases*) ಎಂಬ ತತ್ವ ಸೆಮ್ಮೆಲ್ವೀಸ್‌ನ ಸಿದ್ಧಾಂತದಲ್ಲಿ ಅಡಕವಾಗಿಲ್ಲವಾದ್ದರಿಂದ, ಅದನ್ನು ಕಟುವಾಗಿ ಟೀಕಿಸಿದ. ಅವನ ನಂತರ ಮಾತಾಡಿದವರೆಲ್ಲರೂ ಅವನ ಟೀಕೆಯನ್ನೇ ಮುಂದುವರಿಸಿದರು. ವೈದ್ಯ ಲೋಕದ ಜಡತೆ ಮತ್ತು ಅಂಧಕಾರವನ್ನು ತೊಡೆಯಲು ದೊರೆತ್ತಿದ್ದ ಸುವರ್ಣಾವಕಾಶವೊಂದು ವಿಫಲವಾಯಿತು.

ಹೈಡಲ್‌ಬರ್ಗ್ ಸಮ್ಮೇಳನದ ಫಲಿತಾಂಶಗಳು ಸೆಮ್ಮೆಲ್ವೀಸ್‌ನನ್ನು ಇನ್ನೂ ಹತಾಶನಾಗುವಂತೆ ಮಾಡಿದವು. ಅವನಲ್ಲಿದ್ದ ಸ್ಥೈರ್ಯ ಮತ್ತು ಮನಃಶಾಂತಿ ಕಡಿಮೆಯಾದವು. ಮತ್ತೆ ಭಾವಪರವಶನಾದ. ಬಾಹ್ಯ ನಡ ವಳಿಕೆಗಳಲ್ಲೂ ಅವನು ಮತಿಭ್ರಾಂತನಂತೆ ಕಾಣಿಸುತ್ತಿದ್ದ.

ಸಮ್ಮೇಳನದಲ್ಲಿ ತನ್ನನ್ನು ಟೀಕಿಸಿದವರಿಗೆ ಅಲ್ಲೇ ಸರಿಯಾದ ಉತ್ತರ ಕೊಡಲು ಸಾಧ್ಯವಾಗದ್ದರಿಂದ ಈಗ ಅಂತಹವರಿಗೆಲ್ಲಾ ಪತ್ರ ಬರೆಯ ತೊಡಗಿದ. ಅವನನ್ನು ಟೀಕಿಸಿದ ಸ್ಕ್ಯಾನ್‌ಜೋನಿ (*Scan Zoni*) ಗೆ ಬರೆದ ಪತ್ರದಲ್ಲಿ "ಬಾಣಂತಿ ಜ್ವರ ಒಂದು ಸಾಂಕ್ರಾಮಿಕ ರೋಗ, ಅದನ್ನು ತಡೆಗಟ್ಟಲು ಸಾಧ್ಯವೇ ಇಲ್ಲ ಎಂಬ ನಿಮ್ಮ ವಾದವು ನಿಮ್ಮಿಂದಲೇ ಕೊಲೆ ಯಾದ ಸಾವಿರಾರು ತಾಯಂದಿರ ಶವಗಳ ಮೇಲೆ ನಿಂತಿದೆ. ನನ್ನ ಸಿದ್ಧಾಂತ ತಪ್ಪೆನಿಸಿದರೆ ಕಾರಣಗಳನ್ನು ತಿಳಿಸಿ, ಅಲ್ಲದೇ ನಿಮ್ಮ ತತ್ವಗಳನ್ನೇ ಮುಂದಿನ ಪೀಳಿಗೆಯ ವೈದ್ಯರಿಗೂ ಬೋಧಿಸುವುದನ್ನು ಮುಂದುವರಿಸಿದರೆ, ನೀವೊಬ್ಬ ಮಹಾ ಕೊಲೆಪಾತಕಿಯೆಂದು ದೇವರ ಮುಂದೆ ಪ್ರಮಾಣ ಮಾಡಿ ಹೇಳು ತ್ತೇನೆ" ಎಂದು ಘೋಷಿಸಿದ್ದ.

ಸೈಬೋಲ್ಡ್ (*Seibold*) ಎಂಬ ಸ್ನೇಹಿತನಿಗೆ ಬರೆದ ಪತ್ರದಲ್ಲಿ "ನಿಮ್ಮ ಸ್ನೇಹದ ಸವಿನೆನಪುಗಳು ಸದಾ ನನ್ನಲ್ಲಿವೆ. ಆದರೆ ಬಾಣಂತಿ ಜ್ವರದಿಂದ ನರಳಿ ಸಾಯುವ ತಾಯಂದಿರ ಆರ್ತಧ್ವನಿ ನಮ್ಮಿಬ್ಬರ ಸ್ನೇಹಕ್ಕೆ ಧಕ್ಕೆ ತರಬಹುದು. ನಾನು ೧೮೪೮ರಲ್ಲಿ ಈ ಸಿದ್ಧಾಂತವನ್ನು ರೂಪಿಸುವ ಮೊದಲು ೪೫ ಜನ ತಾಯಂದಿರನ್ನು ಶವದ ಮನೆಗೆ ಕಳುಹಿಸಿದ್ದೆ. ಈಗ ೧೮೫೪ರಲ್ಲಿ ಗುಸ್ಟಾವ್‌ಬ್ರೌನ್ (*Gustov Brown*) ಮತ್ತು ಅವನ ಅನುಯಾಯಿಗಳ ಕೈಯಿಂದ ೪೦೦ ಜನ ಬಾಣಂತಿಯರು ಶವಗೃಹಕ್ಕೆ ತೆರಳಿ ದ್ದಾರೆ. ನನ್ನ ಸಿದ್ಧಾಂತಗಳನ್ನು ಅನುಸರಿಸುವುದರಿಂದ ಪ್ರತಿವರ್ಷ ಸಾವಿ ರಾರು ತಾಯಂದಿರನ್ನು ಬದುಕಿಸಬಹುದೆಂದು ಹಲವಾರು ನಿದರ್ಶನಗಳಿಂದ ತೋರಿಸಿದರೂ, ಅವುಗಳನ್ನು ಜಾರಿಗೆ ತರದ ವೈದ್ಯರನ್ನೆಲ್ಲಾ ನಿವೃತ್ತಿ ಗೊಳಿಸಬಾರದೇಕೆ ? ನನಗೆ ಅಧಿಕಾರವಿರುವುದಾದರೆ ಆ ಪವಿತ್ರ ಕಾರ್ಯ ವನ್ನು ನಾನೇ ಮಾಡುತ್ತಿದ್ದೆ. ೧೦–೧೨ ಜನ ವೈದ್ಯರನ್ನು ನಿವೃತ್ತಿಗೊಳಿ ಸುವುದರಿಂದ ಯಾವ ಹಾನಿಯೂ ಆಗುವುದಿಲ್ಲ. ಅವರೆಲ್ಲಾ ಮಹಾ

ಪಾತಕಿಗಳೆಂದು ನಾನು ಘಂಟಾಘೋಷವಾಗಿ ಹೇಳುವ ಕಾಲ ಈಗ ಬಂದಿದೆ'' ಎಂದು ತನ್ನ ಮನಸ್ಸಿನಲ್ಲಿದ್ದ ದುಗುಡವನ್ನು ಹೊರಗೆಡಹಿದ್ದ.

**ಚಿತ್ತಭ್ರಮಣೆ-ಹುಚ್ಚಾಸ್ಪತ್ರೆಗೆ ದಾಖಲು :**

ಮೇಲಿನ ಪತ್ರಗಳ ಒಕ್ಕಣೆಯಿಂದ ಸೆಮ್ಮೆಲ್ವೀಸ್‌ನ ಮನಸ್ಸಿನಲ್ಲಾಗುತ್ತಿದ್ದ ಬದಲಾವಣೆಗಳನ್ನು ಊಹಿಸಬಹುದು. ಕ್ರಮೇಣ ಅವನ ನಡವಳಿಕೆ ಮತ್ತು ಮಾತುಕತೆಗಳಲ್ಲೂ ಗಮನಾರ್ಹವಾದ ಬದಲಾವಣೆಗಳಾದವು. ಸದಾ ಆಲೋಚನಾ ಮಗ್ನನಾಗಿ ಚಿಂತಾಕ್ರಾಂತನಂತಾಗಿರುತ್ತಿದ್ದನು. ಸಣ್ಣಪುಟ್ಟ ವಿಷಯಗಳಿಗೂ ರೇಗಾಡುತ್ತಿದ್ದ. ಬಾಣಂತಿ ಜ್ವರದ ಪ್ರಸ್ತಾಪ ಬಂದಾಗಲಂತೂ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ರಸ್ತೆಯಲ್ಲಿ ದಂಪತಿಗಳಾರಾದರೂ ಸಿಕ್ಕರೆ, ಹೆರಿಗೆ ಸಮಯದಲ್ಲಿ ಕೈಗಳನ್ನು ಶುಚಿ ಮಾಡುವ ವೈದ್ಯರಿಂದಲೇ ಹೆರಿಗೆ ಮಾಡಿಸಿಕೊಳ್ಳುವಂತೆ ಉಪದೇಶಿಸುತ್ತಿದ್ದ. ಕೊಠಡಿಯ ಬಾಗಿಲು ಹಾಕಿಕೊಂಡು ಮೃಗಾಲಯದ ಪ್ರಾಣಿಯಂತೆ ಶತಪಥ ತಿರುಗುತ್ತಿದ್ದ.

ಅವನಿಗೆ ಮತಿಭ್ರಮಣೆಯಾಗಿರುವುದಕ್ಕೆ ಇನ್ನೂ ಹೆಚ್ಚಿನ ಪುರಾವೆಗಳು ಬೇಕಿರಲಿಲ್ಲ. ಅವನ ಹೆಂಡತಿ ಬುಡಾಪೆಸ್ಟಿನ ಕೆಲವು ವೈದ್ಯರಿಂದ ಚಿಕಿತ್ಸೆ ನೀಡಲು ಪ್ರಯತ್ನಪಟ್ಟಳು. ಚಿತ್ತಭ್ರಮಣೆಯ ಪರಮಾವಧಿಯಲ್ಲಿದ್ದ ಸೆಮ್ಮೆಲ್ವೀಸ್ ಅವರಾರಿಗೂ ಎಡೆಕೊಡಲಿಲ್ಲ. ಬೇರೆ ದಾರಿ ಕಾಣದೆ ಅವನನ್ನು ವಿಯೆನ್ನಾದ ಹಳೆಯ ಗುರುಗಳ ಹತ್ತಿರ ಕರೆದುಕೊಂಡು ಹೋದಳು. ಹಿಂದಿನ ಹಿತೈಷಿಗಳಾದ ಸ್ಕೋಡ, ಹೀಬ್ರ ಮತ್ತು ರೋಕಿಟಾನ್ಸ್ಕಿಯವರು ಅವನ ಸ್ಥಿತಿಯನ್ನು ನೋಡಿ ಮಮ್ಮಲ ಮರುಗಿದರು.

ಪೂರ್ತಿ ಮತಿಭ್ರಮಣೆಗೊಳಗಾಗಿದ್ದ ಅವನನ್ನು ಹುಚ್ಚಾಸ್ಪತ್ರೆಗೆ ಸೇರಿಸಲೇಬೇಕಾಯಿತು. ಒಂದೆರಡು ದಿನಗಳಲ್ಲಿ ನಂಜಿನ ಜ್ವರದ ಚಿಹ್ನೆಗಳು ತಲೆದೋರಿದವು. ಕೆಲವು ದಿನಗಳ ಹಿಂದೆ ಬುಡಾಪೆಸ್ಟ್‌ನಲ್ಲಿ ಕಷ್ಟತರದ ಹೆರಿಗೆ ಮಾಡಿಸುವಲ್ಲಿ ಅವನ ಕೈಬೆರಳಿಗೆ ಗಾಯವಾಗಿದ್ದನ್ನು ಯಾರೂ ಲಕ್ಷಿಸಿಯೇ ಇರಲಿಲ್ಲ. ಮಾನಸಿಕ ಆಂದೋಳನದಲ್ಲಿ ಅವನು ಅದಕ್ಕೆ ಗಮನ ಕೊಟ್ಟಿರಲಿಲ್ಲ. ಮುಂದೆ ವಿಪರೀತ ಜ್ವರ ಹಾಗೂ ಬುದ್ಧಿಭ್ರಮಣೆ ಹೆಚ್ಚಾಗಿ ಅಸು ನೀಗಿದ. ೧೮೬೫ರ ಆಗಸ್ಟ್ ೧೩ರಂದು ಸೆಮ್ಮೆಲ್ವೀಸ್ ಸತ್ತಾಗ

ಕೇವಲ ೪೫ ವರ್ಷ. ಸಾವಿನಲ್ಲೂ ಆಪ್ತ ಹಿತೈಷಿ ಕೊಲ್ಲೇಚಟೆಸ್ಕ ಮತ್ತು ಜೀವನದ ಉದ್ದಕ್ಕೂ ಕಲ್ಯಾಣಕ್ಕಾಗಿ ಸೆಣಸಿದ ಬಾಣಂತಿ ಜ್ವರದ ತಾಯಂದಿರ ಗೆಳೆತನ! ಅವನ ಶವ ಪರೀಕ್ಷೆ ಮಾಡಿದಾಗ ಅಂತಹದೇ ಕುರುಹುಗಳಿದ್ದು ವಂತೆ. ವೈದ್ಯಕೀಯ ವಿಜ್ಞಾನದ ಇತಿಹಾಸದಲ್ಲಿ ಮಾರಕ ಕಾಯಿಲೆಗಳ ಗುಟ್ಟನ್ನರಿಯಲು ಸೆಣಸಿ ಮಡಿದ ಕೆಲವೇ ಹುತಾತ್ಮರ ಗುಂಪಿಗೆ ಸೆಮ್ಮೆಲ್ವೀಸನೂ ಸೇರಿಹೋದ.

ಸೆಮ್ಮೆಲ್ವೀಸ್‌ನ ಜೀವಿತ ಕಾಲದಲ್ಲಿ ಆತನ ಸಿದ್ಧಾಂತಗಳನ್ನು ವೈದ್ಯ ಲೋಕವು ಒಪ್ಪಿಕೊಳ್ಳದಿದ್ದುದರಿಂದ ದೊರಕಬೇಕಾಗಿದ್ದ ಕೀರ್ತಿ ಗೌರವಗಳು ಅವನದಾಗಲಿಲ್ಲ. ವಿಪರ್ಯಾಸವೆಂದರೆ ಆ ಸಿದ್ಧಾಂತಗಳ ಪ್ರತಿಪಾದನೆಯಿಂದ ಅವನು ಪಡಬಾರದ ಕಷ್ಟನಷ್ಟಗಳಿಗೆ ಸಿಲುಕಿ ಅಂತಹದೇ ನಂಜಿನ ಜ್ವರಕ್ಕೆ ಬಲಿಯಾದ. ಅವನ ಸಂಶೋಧನೆಯ ಮಹತ್ವ ಪ್ರಪಂಚಕ್ಕೆ ಅರಿವಾದದ್ದು ಅವನು ಗತಿಸಿದ ಮೊದಲ ದಶಕಗಳ ನಂತರ. ೧೯೦೬ರಲ್ಲಿ ಪ್ರಪಂಚದ ನೂರಾರು ವಿಜ್ಞಾನಿಗಳು ಕಲೆತು ಅವನನ್ನು ಸ್ಮರಿಸಿದರಲ್ಲದೆ, ಸೆಮ್ಮೆಲ್ವೀಸ್‌ನ ಕಂಚಿನ ಪ್ರತಿಮೆಯನ್ನು ಸ್ಥಾಪನೆ ಮಾಡಿದರು.

## ಬಾಣಂತಿ ಜ್ವರದ ಇತಿಹಾಸ :

ಬಾಣಂತಿ ಜ್ವರದ ಸಮಸ್ಯೆ ಸೆಮ್ಮೆಲ್ವೀಸ್‌ನ ಕಾಲ (೧೮೧೮–೧೮೬೫) ಕ್ಕಿಂತಲೂ ಮೊದಲೇ ಹಲವಾರು ವೈದ್ಯರ ಗಮನ ಸೆಳೆದಿತ್ತು. ಮ್ಯಾಂಚೆಸ್ಟರ್‌ನ ಚಾರ್ಲ್ಸ್‌ವೈಟ್, ಅದೊಂದು ಸೋಂಕು ಜ್ವರವೆಂದು ಪರಿಗಣಿಸಿ ವೈದ್ಯರು ಮತ್ತು ದಾದಿಯರ ಕೈಗಳಿಂದ ಒಬ್ಬರಿಂದೊಬ್ಬರಿಗೆ ಹರಡುತ್ತದೆಂಬ ಸಿದ್ಧಾಂತವನ್ನು ನಿರೂಪಿಸಿದ್ದ. ಆಗಲೂ ಆ ತತ್ವಗಳ ಆಚರಣೆಗೆ ವೈದ್ಯಲೋಕದ ಉದಾಸೀನತೆ ಅಡ್ಡಬಂದಿರಬೇಕು.

ಅಮೆರಿಕಾದ ಆಲಿವರ್ ವೆಂಡಲ್ ಹೋಮ್ಸ್ ಸಾಮಾಜಿಕ, ರಾಜಕೀಯ, ಸಾಹಿತ್ಯ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಹೆಸರಾಂತ ವ್ಯಕ್ತಿ. ಬೋಸ್ಟನ್ ನಗರದ ಹೆರಿಗೆ ಆಸ್ಪತ್ರೆಯ ಮುಖ್ಯಸ್ಥನೂ ಆಗಿದ್ದ. ಯುರೋಪಿನಲ್ಲಿ ಸೆಮ್ಮೆಲ್ವೀಸ್ ಬಾಣಂತಿ ಜ್ವರದ ಬಗೆಗೆ ಸಂಶೋಧನೆ ನಡೆಸುತ್ತಿರುವ ಸಮಯದಲ್ಲಿ ಹೋಮ್ಸ್ ಆ ಸಮಸ್ಯೆಯನ್ನು ಅರಿತವನಾಗಿದ್ದು "ಬಾಣಂತಿ

ಜ್ವರ ಹರಡುವ ಬಗೆ'' ಎಂಬ ಲೇಖನವನ್ನು ಬರೆದಿದ್ದ. ಸೆಮ್ಮೆಲ್ವೀಸ್ ಪ್ರತಿಪಾದಿಸಿದ ಸಿದ್ಧಾಂತವನ್ನೇ ಪ್ರತಿಪಾದಿಸುತ್ತಿದ್ದ ಹೋಮ್ಸ್ ಸಹ ಅಮೆರಿಕಾದಲ್ಲೂ ಪಟ್ಟಭದ್ರ ಹಿತಾಸಕ್ತಿಗಳನ್ನು ಎದುರಿಸಬೇಕಾಯಿತು. ಆ ಕಾಲದ ಪ್ರತಿಭಾವಂತ ವ್ಯಕ್ತಿ ಎನಿಸಿದ ಫಿಲಡೆಲ್ಫಿಯಾದ ಮಿಗ್ಸ್ ಮತ್ತು ಅವನ ಬಾಲ ಬಂಡುಕರು ಹೋಮ್ಸ್‌ನ ಸಿದ್ಧಾಂತಗಳನ್ನು ತಮ್ಮೆಲ್ಲಾ ಪ್ರಭಾವ ಬೀರಿ ವಿರೋಧಿಸಿದರು. ಮಿಗ್ಸ್ ತಂಡದವರೇ ಹಿಂದೆ ಅನೆಸ್ಥೀಸಿಯಾ ಪದ್ಧತಿಗೆ ವಿರೋಧ ವ್ಯಕ್ತಪಡಿಸಿದ್ದರು. ಹಲವಾರು ಕ್ಷೇತ್ರಗಳಲ್ಲಿ ಕಾರ್ಯನಿರತನಾಗಿದ್ದ ಹೋಮ್ಸ್ ಬಾಣಂತಿ ಜ್ವರದ ಸಮಸ್ಯೆಗೆ ಹೆಚ್ಚಿನ ಗಮನ ಕೊಡದೆ ಆ ಬಗೆಗೆ ತೀವ್ರ ಹೋರಾಟ ನಡೆಸುವಲ್ಲಿ ವಿಫಲನಾದ.

ಯೂರೋಪ್‌ನಲ್ಲಿ ಅದೇ ಸಮಯದಲ್ಲಿ ಬಾಣಂತಿ ಜ್ವರದ ಸಮಸ್ಯೆ ಬಗೆಗೆ ಅನುಕಂಪವಿದ್ದವನೆಂದರೆ ಜರ್ಮನಿಯ ಕೀಲ್ ವಿಶ್ವವಿದ್ಯಾನಿಲಯದ ಮೈಕೇಲಿಸ್. ೧೮೪೭ ರ ಸಮಯದಲ್ಲಿ ಅವನ ಆಸ್ಪತ್ರೆಯಲ್ಲಿ ಈ ಕಾಯಿಲೆಯಿಂದ ಸಾಯುತ್ತಿದ್ದವರ ಪ್ರಮಾಣವನ್ನು ಸಹಿಸಲಾರದೆ ಆಸ್ಪತ್ರೆಯನ್ನೇ ಕೆಲವು ಕಾಲ ಮುಚ್ಚಿದ್ದ. ಆದರೆ ಆಸ್ಪತ್ರೆಯನ್ನು ಮತ್ತೆ ತೆರೆದಾಗ ಅದೇ ಸಮಸ್ಯೆ ಎದುರಾಗುತ್ತಿತ್ತು. ಅಮೆರಿಕಾದ ಹೋಮ್ಸ್‌ನ ಸಿದ್ಧಾಂತದ ಬಗ್ಗೆ ವರ್ತಮಾನವಿದ್ದರೂ, ಅದರ ವಿವರ ಸಿಕ್ಕಿರಲಿಲ್ಲ. ಸೆಮ್ಮೆಲ್ವೀಸ್‌ನ ಸಿದ್ಧಾಂತಗಳು ಪ್ರಕಟವಾದ ಬಹಳ ಕಾಲದನಂತರ ಅವನ ಲೇಖನಗಳು ಸಿಕ್ಕಿದ್ದವು. ಅವನೂ ಕೂಡ ಶವ ಪರೀಕ್ಷಾನಂತರ ಹೆರಿಗೆ ಕೋಣೆಗೆ ಹೋಗುವ ಅಭ್ಯಾಸದವನಾಗಿದ್ದರಿಂದ ಸೆಮ್ಮೆಲ್ವೀಸ್‌ನ ತತ್ವಗಳು ಸರಿಯಾದದ್ದೆಂಬುದರ ಅರಿವುಂಟಾಯಿತು. ತಮ್ಮೆಲ್ಲರ ತಪ್ಪಿನಿಂದ ಮರಣ ಹೊಂದಿದ ಸಾವಿರಾರು ತಾಯಂದಿರ ದಾರುಣ ಚಿತ್ರ ಅವನ ಕಣ್ಣಮುಂದೆ ಹಾದು ಹೋದಂತಾಯಿತು. ಮನಃಶಾಂತಿಯನ್ನು ಕಳೆದುಕೊಂಡು, ಚಿಂತಾಕ್ರಾಂತನಾದ. ಮಾನಸಿಕ ಉದ್ವೇಗವನ್ನು ತಾಳಲಾರದೆ ರೈಲಿನ ಕೆಳಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ !

ಈ ಘಟನೆ ಆ ಕಾಲದ ಬಾಣಂತಿ ಜ್ವರದ ಸಮಸ್ಯೆ ಮತ್ತು ಸೆಮ್ಮೆಲ್ವೀಸ್‌ನ ಸಿದ್ಧಾಂತಗಳೆರಡಕ್ಕೂ ಸಾಕ್ಷಿಯಾದಂತಿದೆ. ಸುದ್ದಿ ಸಮಾಚಾರಗಳು ಈಗಿನಂತೆ ಕ್ಷಿಪ್ರವಾಗಿ ಹರಡುವಂತಿದ್ದು, ಸುಲಭ ಪ್ರಯಾಣದ

ಅವಕಾಶಗಳಿದ್ದರೆ ಸೆಮ್ಮೆಲ್ವೀಸ್, ಆಲಿವರ್ ವೆಂಡಲ್ ಹೋಮ್ಸ್ ಮತ್ತು ಮೈಕೇಲಿಸ್‌ನಂಥವರು ಒಟ್ಟಾಗಿ ವೈದ್ಯಲೋಕದ ಕುರುಡರ ಕಣ್ಣು ತೆರೆಸ ಬಹುದಾಗಿತ್ತು. ಸೆಮ್ಮೆಲ್ವೀಸ್ ಮತ್ತು ಮೈಕೇಲಿಸ್‌ರ ಅಕಾಲ ಮರಣವೂ ಆಗುತ್ತಿರಲಿಲ್ಲ.

# ೩. ಆಂಟಿಸೆಪ್ಟಿಕ್

ಸೆಮ್ಮೆಲ್ವೀಸ್‌ನ ಜೀವಿತ ಕಾಲದಲ್ಲೇ ಬಾಣಂತಿ ಜ್ವರದ ಸಂಶೋಧನೆಯಂತಹ ಇನ್ನೊಂದು ಮಹತ್ವದ ಶೋಧನೆ ಬ್ರಿಟನ್ನಿನಲ್ಲೂ ಜರುಗುತ್ತಿತ್ತು. ಅವನು ಗತಿಸಿದ ವರ್ಷವೇ ಶಸ್ತ್ರ ಚಿಕಿತ್ಸಾ ಪದ್ಧತಿಯಲ್ಲಿ ಕ್ರಾಂತಿ ಕಾರಕ ಬದಲಾವಣೆಯನ್ನು ಮಾಡುವಂತಹ ಫಲಿತಾಂಶಗಳು ಬ್ರಿಟನ್ನಿನಲ್ಲಿ ಪ್ರಕಟವಾದವು.

ಆಂಟಿಸೆಪ್ಟಿಕ್ (*Antiseptic*) ಎಂಬ ಪದ ಈಗ ಎಲ್ಲೆಡೆ ಮನೆ ಮಾತಾಗಿದೆ, ಆಂಟಿಸೆಪ್ಟಿಕ್ ಅಥವಾ "ನಂಜು ರೋಧಕ" ನಿಯಮಗಳು ನಮಗರಿವಿಲ್ಲದೆ ನಮ್ಮ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿವೆ. ಅವುಗಳ ಆಚರಣೆಯಿಂದ ಮಾನವ ಜನಾಂಗ ಬದುಕಿದೆ ಮತ್ತು ಬದುಕುತ್ತಲೂ ಇದೆ.

ಆಧುನಿಕ ಶಸ್ತ್ರ ಚಿಕಿತ್ಸಾ ವಿಧಾನಗಳ ಪ್ರಗತಿಯಲ್ಲಿ ಆಂಟಿಸೆಪ್ಟಿಕ್ ನಿಯಮದ ಉಗಮ ಒಂದು ಮಹತ್ತರ ಮೈಲುಗಲ್ಲು. ಈಗಲೂ ಪ್ರತಿ ಶಸ್ತ್ರ ಚಿಕಿತ್ಸೆಯ ಯಶಸ್ಸಿಗೂ ಆ ನಿಯಮಗಳ ಕಟ್ಟುನಿಟ್ಟಾದ ಆಚರಣೆಯೇ ದಾರಿ ದೀಪ ಹಾಗೂ ಜೀವನಾಡಿ.

ಹಲವು ವೈದ್ಯಕೀಯ ಸಂಶೋಧನೆಗಳಂತೆ ಅದರ ಉಗಮವೂ ಒಂದು ರೋಮಾಂಚಕಾರೀ ಘಟನೆ. ಆಂಟಿಸೆಪ್ಟಿಕ್ ನಿಯಮಗಳ ಜನಕ ಜೋಸೆಫ್ ಲಿಸ್ಟರ್ (*Joseph Lister*) ಇಂಗ್ಲೆಂಡ್‌ನ ಅತ್ಯಂತ ಖ್ಯಾತಿ ಗಳಿಸಿದ ಶಸ್ತ್ರವೈದ್ಯನಾದ. ಅವನ ಜೀವಿತ ಕಾಲದಲ್ಲೇ ಸಂಶೋಧನೆಯ ಪರಿಣಾಮಗಳು ಪ್ರಪಂಚದಾದ್ಯಂತ ಜಾರಿಗೆ ಬಂದು ಶಸ್ತ್ರಚಿಕಿತ್ಸೆ ವಿಧಾನಗಳಲ್ಲಿ ಮಹಾಕ್ರಾಂತಿಯಾಯಿತಲ್ಲದೆ ಅವನಿಗೂ ಅಪಾರ ಕೀರ್ತಿ ಗೌರವಗಳು ಲಭಿಸಿದವು.

ಜೋಸೆಫ್ ಲಿಸ್ಟರ್‌ನ ಸಾಧನೆಗಳ ಮಹತ್ವವನ್ನು ವಿವೇಚಿಸುವ ಮೊದಲು, ಆಂಟಿಸೆಪ್ಟಿಕ್ ನಿಯಮಗಳ ಉಗಮದ ಮೊದಲು ವೈದ್ಯವೃತ್ತಿ

ಆದರಲ್ಲೂ ಶಸ್ತ್ರಚಿಕಿತ್ಸಾ ಪದ್ಧತಿಯ ಪರಿಸ್ಥಿತಿ ಮತ್ತು ಆಗುತ್ತಿದ್ದ ಅನಾಹುತಗಳನ್ನು ಅವಲೋಕಿಸುವುದು ಅನಿವಾರ್ಯ.

ಅನಾದಿ ಕಾಲದಿಂದಲೂ ಶಸ್ತ್ರಚಿಕಿತ್ಸೆ ಆಚರಣೆಯಲ್ಲಿದ್ದಿರಬಹುದಾದರೂ ಅದರಲ್ಲಿ ಹೆಚ್ಚಿನ ಪ್ರಗತಿಯಾದದ್ದು ಕೇವಲ ಒಂದು ಶತಮಾನದಿಂದೀಚೆಗೆ. ಅದು ವ್ಯವಸ್ಥಿತ ಹಾಗೂ ಗೌರವಾನ್ವಿತ ಉದ್ಯೋಗವಾಗಿ ಈಗಿನ ಉಚ್ಛ್ರಾಯ ಸ್ಥಿತಿಗೆ ಬರುವ ದಾರಿಯಲ್ಲಿ ನಡೆದ ಘಟನೆಗಳು ವೈದ್ಯಕೀಯ ವಿಜ್ಞಾನದ ಇತಿಹಾಸದಲ್ಲಿ ಅತ್ಯಂತ ಕುತೂಹಲಕಾರೀ ಅಧ್ಯಾಯ. ಚಾಕು, ಕತ್ತರಿಗಳ ಬಳಕೆಯಲ್ಲಿ ಪಳಗಿದ್ದ ಕ್ಷೌರಿಕರೇ ಮೊಟ್ಟಮೊದಲ ಶಸ್ತ್ರವೈದ್ಯರು(*Barber Surgeons*). ನಡೆಯುತ್ತಿದ್ದ ಶಸ್ತ್ರಚಿಕಿತ್ಸೆಗಳೆಂದರೆ ಮೈಮೇಲೆ ಏಳುವ ಬಾವು, ಕುರುಗಳನ್ನು ಒಡೆಯುವುದು, ಗಾಯಗಳನ್ನು ಸುಡುವುದು, ಜಖಂ ಆದ ಕೈಕಾಲುಗಳನ್ನು ಕತ್ತರಿಸುವುದು, ಇತ್ಯಾದಿ.

ಶಸ್ತ್ರಚಿಕಿತ್ಸಾ ವಿಧಾನಗಳ ಪ್ರಗತಿಗೆ ಮೊದಲ ಅಡ್ಡಿಯೆಂದರೆ, ನೋವು. ಅನೆಸ್ಥೀಸಿಯ ಪದ್ಧತಿಯ ಉಗಮವಾಗುವವರೆಗೂ ಶಸ್ತ್ರಚಿಕಿತ್ಸೆ ಮುಂದುವರಿಯಲಾಗಲಿಲ್ಲ. ಮುಂದಿನ ಅಡಚಣೆಯೆಂದರೆ ಶಸ್ತ್ರಚಿಕಿತ್ಸೆಗೊಳಗಾದ ಗಾಯಗಳಲ್ಲಿ ಕೀವಾಗಿ, ರೋಗಿಗಳು ನಂಜೇರಿ ಸಾಯುವುದು.

ಆ ಕಾಲದ ವೈದ್ಯ ಸಮೂಹಕ್ಕೆ ಶುಚಿತ್ವದ ನಿಯಮಗಳ ಅರಿವಿರಲಿಲ್ಲ. ಶಸ್ತ್ರವೈದ್ಯರೆನಿಸಿಕೊಂಡವರು ಕೊಳಕುತನಕ್ಕೆ ಹೆಸರುವಾಸಿ. ಅವರ ಉಡಿಗೆ ತೊಡಿಗೆಗಳಲ್ಲಿ ರಕ್ತ, ಕೀವು ಮೆತ್ತಿಕೊಂಡು ಸದಾ ದುರ್ಗಂಧ ಬೀರುತ್ತಿದ್ದವು. ಸೂಜಿದಾರಗಳು ಅವರ ಕವಚಗಳಲ್ಲೇ ನೇತಾಡುತ್ತಿದ್ದವು. ಶಸ್ತ್ರಚಿಕಿತ್ಸೆಗೆ ಮೊದಲು ಕೈಗಳನ್ನಾಗಲೀ, ಸಲಕರಣೆಗಳನ್ನಾಗಲೀ ಶುಚಿ ಮಾಡುವುದರ ಮಹತ್ವ ಯಾರಿಗೂ ಗೊತ್ತಿರಲಿಲ್ಲ.

ಶಸ್ತ್ರಚಿಕಿತ್ಸೆಗಳು ಎಲ್ಲಿಯಾದರಲ್ಲಿ — ಅಡುಗೆಮನೆ, ಉಗ್ರಾಣ, ಹೋಟೆಲ್‌ಗಳಲ್ಲಿ —ನಡೆಯುತ್ತಿದ್ದವು. ವ್ಯವಸ್ಥಿತ ಆಸ್ಪತ್ರೆಗಳಾದ ಮೇಲೂ ಅಲ್ಲಿನ ಕೊಠಡಿಗಳಲ್ಲಿ ಗಾಳಿ–ಬೆಳಕಿಗೆ ಅವಕಾಶವಿಲ್ಲದೆ, ಕೊಳೆತು ನಾರುವ ರೋಗಿಗಳಿಂದ ತುಂಬಿರುತ್ತಿದ್ದವು.

ಯುದ್ಧ ಕಾಲಗಳಲ್ಲಿ ಗಾಯಗೊಂಡ ಯೋಧರು ಬದುಕುವುದು ಅಪರೂಪವಾಗಿತ್ತು. ೧೮೫೪ ರ ಕ್ರಿಮಿಯನ್ ಯುದ್ಧರಂಗದಲ್ಲಿ ಗಾಯಾಳು

ಗಳ ಆಸ್ಪತ್ರೆಯಿದ್ದ ಸ್ಕುಟಾರಿ (*Scutari*) ಯಲ್ಲಿ ಯೋಧರ ಗಾಯಗಳಲ್ಲಿ ಕೀವಾಗಿ ಗತಿಸಿದ ಅಸಂಖ್ಯಾತ ಬ್ರಿಟಿಷ್ ಸೈನಿಕರ ಕತೆ ಇತಿಹಾಸ ಪ್ರಸಿದ್ಧ. ಅಲ್ಲಿ ಶುಶ್ರೂಷೆಗಾಗಿ ತೆರಳಿದ್ದ ಫ್ಲಾರೆನ್ಸ್ ನೈಟಿಂಗೇಲ್ (*Florence Nightingale*) ಗೆ ಅಲ್ಲಿನ ದುಸ್ಥಿತಿಯ ಪ್ರೇರಣೆಯಿಂದಲೇ ದಾದಿ ವೃತ್ತಿಯ ಸುವ್ಯವಸ್ಥೆಗೆ ನಾಂದಿಯಾಯಿತು.

**ಲಿಸ್ಟರ್‌ನ ಬಾಲ್ಯ ಮತ್ತು ವಿದ್ಯಾಭ್ಯಾಸ :**

ಜೋಸೆಫ್ ಲಿಸ್ಟರ್ ಎಸ್ಸೆಕ್ಸ್ ಪ್ರಾಂತದ ಅಪ್ಟಾನ್ ನಗರದ ಕ್ವೇಕರ್ ಮನೆತನದಲ್ಲಿ ೧೮೨೭ರಲ್ಲಿ ಜನಿಸಿದ. ತಂದೆ ಮಾದಕ ವಸ್ತುಗಳ ವ್ಯಾಪಾರಿಯಾದರೂ ಧಾರ್ಮಿಕ ಮನೋಭಾವ ಮತ್ತು ವೈಜ್ಞಾನಿಕ ದೃಷ್ಟಿಗೆ ಹೆಸರಾದವ, ದೃಷ್ಟಿಶಾಸ್ತ್ರ(*Optics*) ದಲ್ಲಿ ಆಸಕ್ತಿಯಿಂದ ಅದರ ಸಂಶೋಧನೆಗಳನ್ನು ನಡೆಸಿದ್ದ.

ಕ್ವೇಕರ್ ಮನೆತನದ ಶಾಂತಿಪ್ರಿಯತೆ ಮತ್ತು ತಂದೆಯ ಮನೋಭಾವ ಜೋಸೆಫ್‌ನ ಜೀವನವನ್ನು ರೂಪಿಸುವಲ್ಲಿ ಸಹಕಾರಿಯಾಯಿತೆನ್ನಬಹುದು. ಅವನದೂ ಶಾಂತ ಸ್ವಭಾವ, ಸಂಕೋಚಪ್ರವೃತ್ತಿ, ಆದರೂ ಚುರುಕುಬುದ್ಧಿ.

ಹುಟ್ಟೂರಲ್ಲಿ ಬಾಲ್ಯದ ವಿದ್ಯಾಭ್ಯಾಸದ ನಂತರ ಲಂಡನ್ ವಿಶ್ವವಿದ್ಯಾನಿಲಯದಲ್ಲಿ ವೈದ್ಯಕೀಯ ತರಬೇತಿಪಡೆದು ೧೮೫೨ರಲ್ಲಿ ವೈದ್ಯಪದವಿ ಪಡೆದುಕೊಂಡ. ಶಸ್ತ್ರಚಿಕಿತ್ಸೆಯಲ್ಲಿ ಹೆಚ್ಚಿನ ಆಸಕ್ತಿ. ಮುಂದೆ ಒಂದೇ ವರ್ಷದಲ್ಲಿ ರಾಯಲ್ ಕಾಲೇಜಿನ ಎಫ್.ಆರ್.ಸಿ.ಎಸ್. ಪದವಿಯನ್ನು ಪಡೆದುಕೊಂಡ.

ಶಸ್ತ್ರಚಿಕಿತ್ಸೆಯಲ್ಲಿ ಹೆಚ್ಚಿನ ಪರಿಣತಿಗಾಗಿ ಎಡಿನ್‌ಬರೋದ ಖ್ಯಾತ ಶಸ್ತ್ರವೈದ್ಯ ಜೇಮ್ಸ್‌ಸೈಮ್ (*James Syme*) ನ ಹತ್ತಿರ ಶಿಷ್ಯವೃತ್ತಿಗೆ ಸೇರಿದ. ಸೈಮ್ ಹಲವಾರು ನಮೂನೆಯ ಶಸ್ತ್ರಚಿಕಿತ್ಸೆಗಳನ್ನು ರೂಪಿಸಿ ಹೆಸರು ಗಳಿಸಿದವನು. ಶುಚಿತ್ವದ ನಿಯಮಗಳ ಮಹತ್ವ ಅರಿಯದಿದ್ದರೂ, ಮಿಕ್ಕೆಲ್ಲರಿಗಿಂತಲೂ ಶುಚಿಯಾದ ವಾತಾವರಣದಲ್ಲಿ ಕೆಲಸ ಮಾಡುತ್ತಿದ್ದು ಒಳ್ಳೆಯ ಫಲಿತಾಂಶ ಪಡೆಯುತ್ತಿದ್ದ.

ಸೈಮ್‌ನ ಕೈ ಕೆಳಗೆ ಹಲವಾರು ತರುಣ ವೈದ್ಯರು ತರಬೇತಿ ಪಡೆಯುತ್ತಿದ್ದರೂ ಲಿಸ್ಟರ್ ತನ್ನ ಸ್ವಾಭಾವಿಕವಾದ ಗುಣಗಳು ಮತ್ತು ಕಾರ್ಯ

ದಕ್ಷತೆಯಿಂದ ಅವನಿಗೆ ಅಚ್ಚುಮೆಚ್ಚಾದ. ಸೈಮ್ ಆಗಾಗ್ಗೆ ವೈದ್ಯ ಸಮೂಹಗಳಿಗೆ ಮಾಡುತ್ತಿದ್ದ ಭಾಷಣಗಳನ್ನು ಟಿಪ್ಪಣಿ ಮಾಡಿ ಹೆಸರಾಂತ ಲಾನ್ಸೆಟ್ (*Lancet*) ಪತ್ರಿಕೆಯಲ್ಲಿ ಪ್ರಕಟಿಸುವ ಹವ್ಯಾಸ ಬೆಳೆಸಿ ಕೊಂಡಿದ್ದ. ಎಡಿನ್‌ಬರೋ ವಿಶ್ವವಿದ್ಯಾನಿಲಯದ ಎಫ್.ಆರ್.ಸಿ.ಎಸ್. ಪದವಿಯೂ ಅದೇ ಸಮಯದಲ್ಲಿ ದೊರೆಯಿತು. ಸೈಮ್‌ಗೆ ಅಚ್ಚುಮೆಚ್ಚಾ ಗಿದ್ದ ಲಿಸ್ಟರ್ ಅವನ ಮಗಳು ಆಗ್ನೀಸ್‌ಳಿಗೂ ಮೆಚ್ಚುಗೆಯಾದ. ಮುಂದೆ ಅವರಿಬ್ಬರೂ ಬಾಳಸಂಗಾತಿಗಳಾದರು.

## ಗ್ಲಾಸ್ಗೊ ಆಸ್ಪತ್ರೆ :

ಲಿಸ್ಟರ್ ಮುಂದೆ (೧೮೬೦) ಗ್ಲಾಸ್ಗೊ ವಿಶ್ವವಿದ್ಯಾನಿಲಯ ಶಸ್ತ್ರ ಚಿಕಿತ್ಸಾ ವಿಭಾಗದ ಪ್ರಾಧ್ಯಾಪಕ ಹುದ್ದೆಗೆ ವಿಕ್ಟೋರಿಯಾ ಮಹಾರಾಣಿ ಯಿಂದ ನೇಮಕಗೊಂಡ. ೩೩ ನೇ ವಯಸ್ಸಿನಲ್ಲೇ ಆ ಪೀಠವನ್ನಲಂಕರಿಸಿದ ಮೊದಲಿಗನಾದ. ಲಿಸ್ಟರ್‌ನ ನೇಮಕಾತಿಯಲ್ಲಿ ಮಾವ ಸೈಮ್‌ನ ಕೈವಾಡ ವಿತ್ತೆಂದು ಅಸಂತೃಪ್ತವಲಯಗಳಿಂದ ಟೀಕೆಗಳೂ ಇದ್ದವು.

ಮುರಿದ ಮೂಳೆಗಳನ್ನು ಕೂಡಿಸುವುದು, ಗಾಯಗಳ ಶುಶ್ರೂಷೆ ಮುಂತಾದುವೇ ಆ ಕಾಲದ ಹೆಚ್ಚಿನ ಶಸ್ತ್ರಚಿಕಿತ್ಸೆಗಳು. ತಲೆ, ಎದೆಗೂಡು ಮತ್ತು ಹೊಟ್ಟೆಯೊಳಗಿನ ರೋಗಗಳಿಗೆ ಹೇಳಿಕೊಳ್ಳುವಂತಹ ಶಸ್ತ್ರಚಿಕಿತ್ಸೆಗಳ ನ್ನಾರೂ ಮಾಡುತ್ತಿರಲಿಲ್ಲ. ಚಿಕಿತ್ಸೆಗೊಳಗಾದವರ ಗಾಯಗಳಲ್ಲಿ ಕೀವಾಗಿ, ನಂಜಿನಿಂದ ಬಹಳಷ್ಟು ಜನ ಸಾಯುತ್ತಿದ್ದರು. ಈ ಪರಿಸ್ಥಿತಿ ಲಿಸ್ಟರ್‌ಗೂ ಜಿಗುಪ್ಸೆಯನ್ನುಂಟು ಮಾಡಿತ್ತು.

ಗ್ಲಾಸ್ಗೊ ಆಸ್ಪತ್ರೆಯಲ್ಲಿ ಮೂಳೆ ಮುರಿದವರ ಚಿಕಿತ್ಸೆಯ ಫಲಿತಾಂಶ ಗಳಲ್ಲಿ ಕೆಲವು ವ್ಯತ್ಯಾಸಗಳು ಮೊದಲು ಲಿಸ್ಟರ್‌ನ ಗಮನ ಸೆಳೆದವು.

ಮೂಳೆ ಮುರಿತದಲ್ಲಿ ಎರಡು ವಿಧ. ಒಳಗಡೆ ಮೂಳೆ ಮುರಿದಿದ್ದು ಗಾಯವಾಗದೇ ಮುರಿದ ತುದಿಗಳು ಒಳಗಡೆಯೇ ಉಳಿದುಕೊಂಡಿರುವುದು ಒಂದು ವಿಧ (*Simple Fracture*) ವಾದರೆ, ಮುರಿದ ಮೂಳೆಯ ತುದಿಗಳು ಗಾಯದ ಮುಖಾಂತರ ಹೊರಕ್ಕೆ ಚಾಚುವುದು ಇನ್ನೊಂದು ವಿಧ (*Compound Fracture*).

ಮೊದಲನೇ ವಿಧದ ಮೂಳೆಗಳನ್ನು ಸರಿಯಾಗಿ ಜೋಡಿಸಿಟ್ಟರೆ ಯಾವ ದುಷ್ಪರಿಣಾಮಗಳೂ ಆಗದೆ ಕಾಲಕ್ರಮೇಣ ಕೂಡಿಕೊಳ್ಳುತ್ತಿದ್ದವು. ಎರಡನೇ ವಿಧದ ಮುರಿತದಲ್ಲಿ ಎಷ್ಟೇ ಕರಾರುವಾಕ್ಕಾಗಿ ಮೂಳೆಗಳನ್ನು ಜೋಡಿಸಿದ್ದರೂ, ಕೆಲವೇ ದಿನಗಳಲ್ಲಿ ಗಾಯದ ಸುತ್ತ ಚರ್ಮ ಕೆಂಪಾಗಿ, ಮುಂದಿನ ಕೆಲವು ದಿನಗಳಲ್ಲಿ ದುರ್ಗಂಧಯುಕ್ತ ಕೀವು ಸುರಿಯಲಾರಂಭಿಸುತ್ತದೆ. ರೋಗಿಗೆ ವಿಪರೀತ ನೋವು ಜ್ವರ ಕಾಣಿಸಿಕೊಂಡು ಚಿತ್ತಭ್ರಮಣೆಗೊಳಗಾಗುತ್ತಿದ್ದರು. ಹೀಗಾದವರಲ್ಲಿ ಹೆಚ್ಚು ಜನ ಅಸು ನೀಗುತ್ತಿದ್ದರು. ಅಂಗ ವಿಚ್ಛೇದನಕ್ಕೊಳಗಾದವರಿಗೂ ಇದೇ ಪರಿಣಾಮ ಕಾದಿರುತ್ತಿತ್ತು. ಲಿಸ್ಟರ್ ಈ ಬದಲಾವಣೆಗಳನ್ನು ಕೂಲಂಕಷವಾಗಿ ಅಭ್ಯಸಿಸತೊಡಗಿದ.

ಗಾಯಗಳಲ್ಲಿ ಹೀಗಾಗುವ ಬದಲಾವಣೆಗಳಿಗೆ "ಉರಿಯೂತ" (*Inflammation*) ಎನ್ನಲಾಗುತ್ತದೆ. ೧೮೫೭ ರಲ್ಲೇ ಲಿಸ್ಟರ್ ಈ ಪರಿಸ್ಥಿತಿಯ ಬಗೆಗೆ ಸಣ್ಣ ಪುಸ್ತಿಕೆಯನ್ನು ಬರೆದು ಪ್ರಕಟಿಸಿದ್ದ. ಆದರೆ ಈ ಪರಿಸ್ಥಿತಿಯನ್ನು ತಡೆಗಟ್ಟಲು ಅಲ್ಲಿಯವರೆಗೂ ಯಾರಿಂದಲೂ ಸರಿಯಾದ ಸಲಹೆಗಳಿರಲಿಲ್ಲ. ಹಾಗೆ ಗಾಯಗಳಲ್ಲಿ ಕೀವು ಸುರಿಯುವುದು ಒಂದು ಒಳ್ಳೆಯ ಪರಿಣಾಮ (*Laudable Pus*) ವೆಂಬುದು ಹೆಚ್ಚಿನ ವೈದ್ಯರ ಅಭಿಪ್ರಾಯವಾಗಿತ್ತೆಂದರೆ, ವೈದ್ಯಲೋಕದಲ್ಲಿ ಅದರ ಬಗೆಗೆ ಇದ್ದ ಅಜ್ಞಾನ ಎಷ್ಟೆಂಬುದರ ಅರಿವಾಗಬಹುದು.

ಈ ಅಭಿಪ್ರಾಯಕ್ಕೆ ಲಿಸ್ಟರ್‌ನ ಸಮ್ಮತಿ ಇರಲಿಲ್ಲ. ವೈದ್ಯಲೋಕದ ಪಿತಾಮಹಾ ಹಿಪೋಕ್ರೇಟ್ಸ್‌ನ, (*Hippocrates*) ಗಾಯಗಳು ಕೀವಾಗದೇ ಪ್ರಥಮ ಪ್ರಯತ್ನದಲ್ಲೇ ವಾಸಿಯಾಗುವುದು ಸಾಧ್ಯ (*Healing by first intention*) ಎಂಬ ಉಕ್ತಿ ಅವನ ಮಿದುಳಿನಲ್ಲಿ ನೆಲೆಯಾಗಿತ್ತು. ಹಾಗೆ ನೋಡಿದರೆ ಕೆಲವು ಗಾಯಗಳು ಕೀವಾಗದೇ ವಾಸಿಯಾಗುತ್ತಿದ್ದುದೂ ಅಪರೂಪವೇನಾಗಿರಲಿಲ್ಲ. ಆದರೆ ಕೆಲವು ಗಾಯಗಳಲ್ಲಿ ಕೀವಾಗುವುದರ ಮರ್ಮವೇನೆಂಬುದು ಅವನನ್ನು ಸದಾ ಬಾಧಿಸುತ್ತಿತ್ತು.

ಲಿಸ್ಟರ್ ಒಂದು ಸಾರಿ ಒಟ್ಟೆಟ್ಟ್ಯೂಕ್ ಎಂಬ ವೈದ್ಯಕೀಯ ವಿದ್ಯಾರ್ಥಿಯ ರಕ್ತನಾಳದ ಊತಕ್ಕೆ ಶಸ್ತ್ರಚಿಕಿತ್ಸೆ ನಡೆಸಿದ್ದ. ಕೆಲವು ದಿನಗಳ ನಂತರ ಹೊಲಿಗೆಯನ್ನು ತೆಗೆಯಲೋಸುಗ ಗಾಯವನ್ನು ಬಿಚ್ಚಿದಾಗ,

ಚರ್ಮವನ್ನು ಸೇರಿಸಿ ಹೊಲಿದಿದ್ದ ದಾರದ ರಂಧ್ರಗಳಿರುವಲ್ಲಿ ಮಾತ್ರ ಕೀವು ಗಟ್ಟಿಕೊಂಡಿದ್ದು ಉಳಿದೆಡೆಗಳಲ್ಲಿ ಕೀವಿಲ್ಲದೆ ಗಾಯ ವಾಸಿಯಾಗಿತ್ತು. ಹೊಲಿಗೆದಾರವಿದ್ದಲ್ಲಿ ಮಾತ್ರ ಕೀವಾಗಿರುವುದು ಆಶ್ಚರ್ಯಕರವಲ್ಲವೇ, ಎಂಬ ಉದ್ಗಾರ ಅವನ ಬಾಯಿಯಿಂದ ಹೊರಬಿತ್ತು. ಲಿಸ್ಟರ್‌ನಲ್ಲಿ ಆತ್ಮೀಯ ಸಲುಗೆಯಿದ್ದ ಬಟ್ಟಿಟ್ಯೂಕ್ ಹೊಲಿಗೆಗೆ ಉಪಯೋಗಿಸಿದ ದಾರದ ಕೆರಳುವಿಕೆ (*Irritation*) ಯಿಂದ ಹಾಗಾಗಿರಬಹುದೆಂದು ಲಘುವಾಗಿ ಉತ್ತರಿಸಿದ.

ಬಟ್ಟಿಟ್ಯೂಕ್‌ನ ಉತ್ತರ ಲಿಸ್ಟರ್‌ನ ಮನಸ್ಸನ್ನು ಕೆರಳಿಸಿತು. ದಾರದ ರಂಧ್ರದಲ್ಲಿನ ಕೆರಳುವಿಕೆ ಸಿಲ್ಕ್‌ದಾರದಿಂದಾಗಿರಲಾರದು, ಅದರ ಮೇಲೆ ಅಥವಾ ಒಳಗಡೆ ಇರಬಹುದಾದ ಇನ್ನಾವುದೋ ವಸ್ತುವಿನಿಂದಾಗಿರಬಾರದೇಕೆ ಎಂಬುದು ಅವನ ಅನುಮಾನ.

ಮುಂದೆ ತಾನು ಸಂಧಿಸಿದ ಶಸ್ತ್ರವೈದ್ಯರ ಹತ್ತಿರವೆಲ್ಲಾ ಈ ಬಗೆಗೆ ಚರ್ಚೆ ನಡೆಸುವುದೇ ಒಂದು ಗೀಳಾಯಿತು. ರಸಾಯನಶಾಸ್ತ್ರ ಪ್ರಾಧ್ಯಾಪಕ ಆಂಡರಸನ್ (*Anderson*) ನೊಡನೆ ಈ ವಿಷಯದ ಪ್ರಸ್ತಾಪ ಬಂದಾಗ, ಫ್ರಾನ್ಸಿನ ರಸಾಯನ ಶಾಸ್ತ್ರಜ್ಞ ಲೂಯಿಪ್ಯಾಶ್ಚರ್ (*Louis Pastuer*) ದ್ರಾಕ್ಷಾರಸದಲ್ಲಿ ಹುದುಗೇಳುವಿಕೆ—ಫರ್ಮೆಂಟೇಷನ್ (*Fermentation*) ಬಗೆಗೆ ನಡೆಸಿದ ಪ್ರಯೋಗಗಳತ್ತ ಅವನ ಗಮನ ಸೆಳೆದ. ಆ ಬಗೆಗೆ ತನ್ನಲ್ಲಿದ್ದ ಕೆಲವು ಲೇಖನಗಳನ್ನು ಅವನಿಗಿತ್ತ. ರಸಾಯನ ಶಾಸ್ತ್ರಜ್ಞನ ಸಂಶೋಧನೆ, ಶಸ್ತ್ರವೈದ್ಯನ ಸಮಸ್ಯೆಗೆ ಪರಿಹಾರ ಒದಗಿಸುವ ಸಾಧ್ಯತೆ ವಿಚಿತ್ರವಾಗಿ ತೋರಿದರೂ, ಲಿಸ್ಟರ್ ಆ ಲೇಖನಗಳನ್ನೇ ಅತ್ಯಂತ ಶ್ರದ್ಧೆಯಿಂದ ಅಭ್ಯಸಿಸಿದ.

### ಲೂಯಿಪ್ಯಾಶ್ಚರ್‌ನ ಸಂಶೋಧನೆ :

ಲೂಯಿಪ್ಯಾಶ್ಚರ್ ವೃತ್ತಿಯಲ್ಲಿ ರಸಾಯನ ಶಾಸ್ತ್ರದವನಾಗಿದ್ದರೂ, ವಿಜ್ಞಾನದ ಹಲವಾರು ಕ್ಷೇತ್ರಗಳಲ್ಲಿ ಸಂಶೋಧನಾ ನಿರತನಾಗಿರುತ್ತಿದ್ದ. ಮದ್ಯಸಾರದ ತಯಾರಿಕೆ ಫ್ರಾನ್ಸ್‌ನ ಮುಖ್ಯ ಕೈಗಾರಿಕೆ. ಅದಕ್ಕಾಗಿ ತಯಾರಿಸುತ್ತಿದ್ದ ದ್ರಾಕ್ಷಿ ಬೆಳೆಗೆ ರೋಗ ತಗುಲಿ ಆ ಕೈಗಾರಿಕೆ ನಶಿಸುವ ಸ್ಥಿತಿ

ಯಲ್ಲಿತ್ತು. ಫ್ರಾನ್ಸ್ ಸರ್ಕಾರ ಈ ರೋಗದ ಬಗೆಗೆ ಸಂಶೋಧನೆ ನಡೆಸಲು ಪ್ಯಾಶ್ಚರ್‌ನನ್ನು ಕೇಳಿಕೊಂಡಿತ್ತು.

ಪ್ಯಾಶ್ಚರ್ ಮೊದಲು ಕೆಲವು ನಿಯಂತ್ರಿತ ಪ್ರಯೋಗಗಳನ್ನು ನಡೆಸಿ ಮದ್ಯಸಾರ ಉತ್ಪತ್ತಿಯಾಗುವ ಫರ್ಮೆಂಟೇಷನ್ (ಹುದುಗೇಳುವಿಕೆ) ಕ್ರಿಯೆಯ ಗುಟ್ಟನ್ನರಿತನು. ಮದ್ಯಸಾರ ತಯಾರಿಸಲು ರೋಗರಹಿತ ದ್ರಾಕ್ಷಿ ಹಣ್ಣುಗಳನ್ನು ಎರಡು ರೀತಿಯಲ್ಲಿ ಬಳಸಿದ. ಅಂತಹ ದ್ರಾಕ್ಷಾರಸವನ್ನು ಎರಡು ಭಾಗ ಮಾಡಿ ಬೇರೆ ಬೇರೆ ಫ್ಲಾಸ್ಕ್‌ಗಳಲ್ಲಿ ಇರಿಸಿದ. ಮೊದಲನೆಯ ಫ್ಲಾಸ್ಕನ್ನು ಚೆನ್ನಾಗಿ ಕಾಯಿಸಿ ಬಿಸಿ ಮಾಡಿ ಮುಚ್ಚಳ ಹಾಕಿ ಇರಿಸಿದ. ಇನ್ನೊಂದನ್ನು ಕಾಯಿಸಲೂ ಇಲ್ಲ, ಮುಚ್ಚಳ ಹಾಕಲೂ ಇಲ್ಲ. ಒಂದೆರಡು ದಿನಗಳನಂತರ ಪ್ರಯೋಗವನ್ನು ವೀಕ್ಷಿಸಿದಾಗ ಕಾಯಿಸದೆ ವಾತಾವರಣಕ್ಕೆ ಬಾಯಿ ತೆರೆದಿಟ್ಟ ಫ್ಲಾಸ್ಕ್‌ನಲ್ಲಿ ಫರ್ಮೆಂಟೇಷನ್ ಕ್ರಿಯೆ ಜರುಗಿ ಮದ್ಯಸಾರ ಉತ್ಪತ್ತಿಯಾಗಿತ್ತು. ಕಾಯಿಸಿ ಮುಚ್ಚಿಟ್ಟ ಫಾಸ್ಕ್‌ನಲ್ಲಿದ್ದ ದ್ರಾಕ್ಷಾರಸದಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ.

ಇದರಿಂದ ವಾತಾವರಣದಲ್ಲಿರಬಹುದಾದ ಸೂಕ್ಷ್ಮಾಣು (ಕಿಣ್ವ–*Yeast*)ಗಳು ಫರ್ಮೆಂಟೇಷನ್ ಕ್ರಿಯೆಗೆ ಕಾರಣವೆಂಬುದು ಶ್ರುತಪಟ್ಟಿತು. ಮುಂದೆ ರೋಗಪೀಡಿತ ದ್ರಾಕ್ಷಿಹಣ್ಣಿನಿಂದ ತಯಾರಾಗುತ್ತಿದ್ದ ಮದ್ಯಸಾರ ಲೋಳೆಯಾಗಿ ಕೆಡುತ್ತಿದ್ದುದಕ್ಕೆ ವಾತಾವರಣದ ಇತರ ಸೂಕ್ಷ್ಮಾಣು (*Bacteria*) ಗಳು ಕಾರಣವೆಂಬುದನ್ನು ಇನ್ನೂ ಕೆಲವು ನಿಯಂತ್ರಿತ ಪ್ರಯೋಗಗಳಿಂದ ಸಾದರಪಡಿಸಿದ. ಆಶ್ಚರ್ಯದ ಸಂಗತಿಯೆಂದರೆ ಪ್ಯಾಶ್ಚರ್ ಶಂಕಿಸಿದ ಕಿಣ್ವಗಳಾಗಲೀ ಅಥವಾ ಇತರ ಸೂಕ್ಷ್ಮಾಣುಗಳನ್ನಾಗಲೀ ಪ್ರತ್ಯಕ್ಷವಾಗಿ ಯಾರಿಂದಲೂ ಆಗ ತೋರಿಸಲಾಗಿರಲಿಲ್ಲ !

ಪ್ಯಾಶ್ಚರ್‌ನ ಲೇಖನಗಳನ್ನು ಓದಿದ ಲಿಸ್ಟರ್ ಅವನ ರೋಗಿಗಳ ತೆರೆದ ಗಾಯಗಳಲ್ಲಿ ಕೀವಾಗುವ ಪರಿಸ್ಥಿತಿಗೂ, ಫರ್ಮೆಂಟೇಷನ್ ಕ್ರಿಯೆಗೂ ಹೋಲಿಕೆ ಇರುವ ಸಂಶಯ ಮೂಡಿತು. ತೆರೆದ ಗಾಯ, ಅಂಗವಿಚ್ಛೇದನ ಮತ್ತು ಇತರ ಶಸ್ತ್ರಚಿಕಿತ್ಸೆಗೊಳಗಾದವರ ಗಾಯಗಳಿಗೆ ವಾತಾವರಣದ ಸೂಕ್ಷ್ಮಾಣುಗಳು ತಗಲುವುದರಿಂದ ಅವುಗಳಲ್ಲಿ ಕೀವಾಗುತ್ತದೆಂಬ ಅಭಿಪ್ರಾಯ ಕ್ರಮೇಣ ಅವನಲ್ಲಿ ಬೇರೂರಿತು. ಗಾಯಗಳಿಗೆ ವಾತಾವರಣದಿಂದ

ತಗಲಬಹುದಾದ ಸೂಕ್ಷ್ಮಾಣುಗಳನ್ನು ನಾಶಪಡಿಸಬಹುದಾದ ವಿಧಾನಗಳತ್ತ ಅವನ ಯೋಚನಾಧಾರೆ ಪ್ರವಹಿಸಿತು. ಮುಂದೆ ಭೇಟಿಯಾದ ವೈದ್ಯರು ಮತ್ತು ವಿಜ್ಞಾನಿಗಳಲ್ಲಿ ಈ ಬಗೆಗೆ ವಿಪುಲ ಚರ್ಚೆ ನಡೆಯುತ್ತಿತ್ತು.

**ಕಾರ್ಬಾಲಿಕ್ ಆಮ್ಲ :**

ಲಿಸ್ಟರ್, ಕಾರ್ಲಿಸಿಲ್ ನಗರದ ಶಸ್ತ್ರವೈದ್ಯನೊಬ್ಬನೊಡನೆ ಈ ಬಗೆಗೆ ಚರ್ಚೆ ನಡೆಯುತ್ತಿದ್ದಾಗ ಸ್ವಾರಸ್ಯಕರ ಘಟನೆ ಹೊರಬಂದಿತು. ಕಾರ್ಲಿಸಿಲ್‌ನ ಚರಂಡಿಗಳು ಸದಾ ಹೊಲಸಾಗಿದ್ದು ದುರ್ಗಂಧಮಯವಾಗಿದ್ದವು. ನಗರದ ಜನರ ಆರೋಗ್ಯ ಸ್ಥಿತಿಯು ಕೆಟ್ಟಿದ್ದಲ್ಲದೇ, ಆ ಚರಂಡಿಗಳ ಕೊಳಚೆ ನೀರಿನಿಂದ ಬೆಳೆದ ಹುಲ್ಲನ್ನು ಮೇಯುತ್ತಿದ್ದ ಹಸುಗಳೂ ಸದಾ ರೋಗ ಪೀಡಿತವಾಗಿರುತ್ತಿದ್ದವು. ಪುರಸಭೆಯವರು ಆ ಚರಂಡಿಗಳಿಗೆ ಕೆಲಕಾಲ ದಿಂದ ಕಾರ್ಬಾಲಿಕ್ ಆಮ್ಲವನ್ನು ಸಿಂಪಡಿಸಲು ಆರಂಭಿಸಿದನಂತರ, ಅಲ್ಲಿನ ಜನರ ಹಾಗೂ ಹಸುಗಳ ಆರೋಗ್ಯ ಸುಧಾರಿಸಿದೆ ಎಂಬ ವಿಷಯವನ್ನು ಆ ವೈದ್ಯರು ತಿಳಿಸಿದರು. ಲಿಸ್ಟರ್‌ನ ಯೋಚನಾಲಹರಿ ಮತ್ತೆ ಪ್ರಸರಿಸಿತು. ಕೊಳಚೆ ನೀರಿನಲ್ಲಿದ್ದ ಸೂಕ್ಷ್ಮಾಣುಗಳು ಅಲ್ಲಿನ ಜನರ ಹಾಗೂ ಹಸುಗಳ ಅನಾರೋಗ್ಯಕ್ಕೆ ಕಾರಣವಾಗಿರಬೇಕು, ಕಾರ್ಬಾಲಿಕ್ ದ್ರಾವಣ ಸೂಕ್ಷ್ಮಾಣುಗಳನ್ನು ನಾಶಮಾಡಿರಬಹುದಾದುದರಿಂದ ಅಲ್ಲಿನವರ ಆರೋಗ್ಯ ಸುಧಾರಿಸಿರಬೇಕು !

ತೆರೆದ ಗಾಯವೊಂದಕ್ಕೆ ಲಿಸ್ಟರ್ ೧೮೬೫ರ ಮಾರ್ಚ್ ತಿಂಗಳಲ್ಲಿ ಕಾರ್ಬಾಲಿಕ್ ದ್ರಾವಣದ ಲೇಪನ ಮಾಡಿದ. ಮೊದಲ ಪ್ರಯೋಗ ಅಷ್ಟೇನೂ ಯಶಸ್ವಿಯಾಗಲಿಲ್ಲ. ಅದಕ್ಕೆ ಉಪಯೋಗಿಸಿದ ಬಟ್ಟೆಬರೆಗಳು ಶುಭ್ರವಾಗಿರಲಿಲ್ಲ. ಮುಂದಿನ ರೋಗಿಯ ಗಾಯಕ್ಕೆ ಶುಭ್ರವಾದ ಬಟ್ಟೆಯನ್ನು ಬಿಸಿನೀರಿನಲ್ಲಿ ಕುದಿಸಿ, ಕಾರ್ಬಾಲಿಕ್ ಆಮ್ಲದ ದ್ರಾವಣ ಲೇಪಿಸಿದ, ಸತತ ಒಂದು ವಾರ ಲಿಸ್ಟರ್ ಸ್ವತಃ ತಾನೇ ಮುತುವರ್ಜಿಯಿಂದ ನಡೆಸಿದ. ಗಾಯದಲ್ಲಿ ಉರಿಯೂತವಾಗಲೀ, ಕೀವಾಗಲೀ ಆಗದೇ ವಾಸಿಯಾಯಿತು. ಮುರಿದ ಮೂಳೆಗಳೂ ಕೂಡಿಕೊಂಡವು. ಲಿಸ್ಟರ್ ತನ್ನೊಳಗೇ ರೂಪಿಸುತ್ತಿದ್ದ ಸಿದ್ಧಾಂತಕ್ಕೆ ಪುಟಕೊಟ್ಟಂತಾಯಿತು.

ಮುಂದೆ ಇಂತಹ ಹಲವಾರು ಪ್ರಯೋಗಗಳನ್ನು ಮಾಡಿ ಲಿಸ್ಟರ್ ಒಳ್ಳೆಯ ಫಲಿತಾಂಶ ದೊರಕಿಸಿದ. ಆ ಸಮಯದಲ್ಲಿ ತಂದೆಗೆ ಬರೆದ ಪತ್ರವೊಂದರಲ್ಲಿ, ಮಾನವ ಜನಾಂಗಕ್ಕೆ ಆಗಬಹುದಾದ ಹತ್ತು ಉಪಕಾರಗಳಲ್ಲೊಂದು ಆ ವಾರ ನಡೆಯಿತೆಂದು ಭವಿಷ್ಯವಾಣಿಯನ್ನೇ ನುಡಿದಿದ್ದ. ದುರ್ಗಂಧಮಯವಾಗಿದ್ದ ಗ್ಲಾಸ್ಗೋ ಆಸ್ಪತ್ರೆಯ ವಾರ್ಡ್‌ಗಳಲ್ಲಿ ನಿರ್ಮಲ ವಾತಾವರಣದ ತಿಳಿಗಾಳಿ ಬೀಸಿತು. "ಅಂಗಕ್ಷಯ". (*Hospital Gangrene*) ಅಲ್ಲಿಂದ ಗಡೀಪಾರಾಯಿತು !

**ಫಲಿತಾಂಶ ಪ್ರಕಟಣೆ :**

ಲಿಸ್ಟರ್‌ನ ಪ್ರಯೋಗಗಳ ಫಲಿತಾಂಶ ೧೮೬೭ ರ ಮಾರ್ಚ್ ೧೬ ರ ಲ್ಯಾನ್ಸೆಟ್ (*Lancet*) ಪತ್ರಿಕೆಯಲ್ಲಿ ಪ್ರಕಟವಾದವು. ತಾನು ನಿರೂಪಿಸಿದ ಸಿದ್ಧಾಂತದ ಹಿನ್ನೆಲೆ, ಪ್ಯಾಶ್ಚರ್‌ನ ಸಂಶೋಧನೆಯ ಮಹತ್ವ ಮತ್ತು ನಡೆಸಿದ ಪ್ರಯೋಗಗಳ ವಿವರವಾದ ಉಲ್ಲೇಖ ಅದರಲ್ಲಿತ್ತು. ಅಂಧಕಾರದಲ್ಲಿ ಮುಳುಗಿದ್ದ ವೈದ್ಯಲೋಕ ಅವನ ಲೇಖನದತ್ತ ಗಮನ ಹರಿಸಲೇ ಇಲ್ಲ ! ಲಿಸ್ಟರ್‌ನ ಕಾರ್ಯದಕ್ಷತೆ ಮತ್ತು ವೈಜ್ಞಾನಿಕ ವಿಚಾರಸರಣಿಯಲ್ಲಿ ಅಪಾರ ನಂಬಿಕೆಯಿದ್ದ ಮಾವ ಸೈಮ್, ಆ ವರ್ಷ ಡಬ್ಲಿನ್‌ನಲ್ಲಿ ನಡೆಯುವ ಬ್ರಿಟಿಷ್ ಮೆಡಿಕಲ್ ಆಸೋಷಿಯೇಶನ್‌ನ ಸಮ್ಮೇಳನದಲ್ಲಿ ಲಿಸ್ಟರ್ ತನ್ನ ಪ್ರಯೋಗಗಳನ್ನು ಪ್ರಕಟಿಸುವಂತೆ ಪ್ರೇರೇಪಿಸಿದ.

**ಡಬ್ಲಿನ್ ಸಮ್ಮೇಳನ :**

೧೮೬೭ರ ಆಗಸ್ಟ್ ೬ ರಲ್ಲಿ ಡಬ್ಲಿನ್‌ನಲ್ಲಿ ಬ್ರಿಟಿಷ್ ವೈದ್ಯಕೀಯ ಸಮ್ಮೇಳನದ ಏರ್ಪಾಡಾಗಿತ್ತು. ಬ್ರಿಟನ್, ಅಮೆರಿಕಾ, ಕೆನಡಾ, ಯುರೋಪ್ ದೇಶಗಳ ಖ್ಯಾತ ವೈದ್ಯರು ಈ ವೈಜ್ಞಾನಿಕ ಮೇಳದಲ್ಲಿ ಭಾಗಿಗಳಾಗಿದ್ದರು. ಜೇಮ್ಸ್‌ಸೈಮ್, ಹೆನ್ರಿಥಾಮ್ಸನ್, ಜೇಮ್ಸ್‌ಸಿಂಪ್ಸನ್ (ಕ್ಲೋರೋಫಾರಂ ಜನಕ) ಮುಂತಾದ ವೈದ್ಯಲೋಕದ ದಿಗ್ಗಜಗಳೂ ಹಾಜರಾಗಿದ್ದರು. ಡಬ್ಲಿನ್ ವಿಶ್ವವಿದ್ಯಾನಿಲಯದ ಸ್ಟೋಕ್ಸ್ ಅಧ್ಯಕ್ಷತೆ ವಹಿಸಿದ್ದರು. ಹಲವಾರು ವೈದ್ಯಕೀಯ ಸಂಶೋಧನೆ ಮತ್ತು ಅನುಭವಗಳ ಬಗೆಗೆ ಲೇಖನಗಳ ಮಂಡನೆಯಾಯಿತು. ಚರ್ಚೆ, ವಾದವಿವಾದ ನಡೆದವು.

ಆಗಸ್ಟ್ ೯ರಂದು ಲಿಸ್ಟರ್‌ನ ಸರದಿ. ಲಿಸ್ಟರ್ ಮೊದಲು ತನ್ನ ತತ್ತ್ವಗಳ ಸಾರಾಂಶವನ್ನಿತ್ತು, ಅವುಗಳಿಗೆ ಆಧಾರವಾದ ಪ್ಯಾಶ್ಚರ್‌ನ ಸಂಶೋಧನೆಗಳ ಮಹತ್ವ, ಕಾರ್ಬಾಲಿಕ್ ಆಮ್ಲದ ಪ್ರಯೋಗ ಮತ್ತು ಅದರಿಂದ ದೊರೆತ ಫಲಿತಾಂಶಗಳನ್ನು ಅಂಕಿ–ಅಂಶಗಳ ಆಧಾರದಿಂದ ಪ್ರತಿಪಾದಿಸಿದ. ಜೊತೆಗೆ ಶಸ್ತ್ರಚಿಕಿತ್ಸೆಗೆ ಉಪಯೋಗಿಸುವ ಸಲಕರಣೆಗಳನ್ನು ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿಡುವುದು, ಬಟ್ಟೆಬರೆಗಳನ್ನು ಬಿಸಿನೀರಿನಲ್ಲಿ ಕುದಿಸುವುದು, ಕೈಗಳನ್ನು ತೊಳೆದು ಶುಚಿ ಮಾಡಿಕೊಳ್ಳುವ ನಿಯಮ—ಆಂಟಿಸೆಪ್ಟಿಕ್ (*Antiseptic*) ಗಳನ್ನೂ ವಿವರಿಸಿದ.

ಲಿಸ್ಟರ್‌ನ ಭಾಷಣ ನಡೆಯುತ್ತಿರುವಾಗಲೇ ಹಲವು ಪ್ರೇಕ್ಷಕರಲ್ಲಿ ವಿಲಕ್ಷಣ ಪ್ರತಿಕ್ರಿಯೆಗಳು ಕಾಣಿಸುತ್ತಿದ್ದವು. ಕೆಲವರು ನಗುತ್ತಿದ್ದರು, ಕೆಲವರಲ್ಲಿ ವ್ಯಂಗ್ಯ ಎದ್ದು ತೋರುತ್ತಿತ್ತು. ಮತ್ತೆ ಕೆಲವರು ಮುಖ ಸಿಂಡರಿಸಿಕೊಂಡಿದ್ದರು.

ಲಿಸ್ಟರ್‌ನ ಭಾಷಣ ಮುಗಿದ ನಂತರ ಹಲವಾರು ವೈದ್ಯರು ಅವನ ಸಿದ್ಧಾಂತಗಳನ್ನು ವಿರೋಧಿಸಿ ಮಾತನಾಡಿದರು. ಆಶ್ಚರ್ಯಕರ ಸಂಗತಿಯೆಂದರೆ ಹಿಂದೆ ಕ್ಲೋರೋಫಾರಂನ್ನು ಪ್ರಚಾರಕ್ಕೆ ತರುವಾಗ ಇಂತಹ ವಿರೋಧಗಳನ್ನು ಎದುರಿಸಿದ ಜೇಮ್ಸ್‌ಸಿಂಪ್ಸನ್ ಲಿಸ್ಟರ್‌ನ ವಾದಕ್ಕೆ ಪ್ರಬಲ ವಿರೋಧ ವ್ಯಕ್ತಪಡಿಸಿದ್ದು, ಲಿಸ್ಟರ್‌ನ ಮಾವ ಸೈಮ್‌ಗೂ ಅವನಿಗೂ ಇದ್ದ ಗುಪ್ತದ್ವೇಷ ಈ ವಿರೋಧಕ್ಕೆ ಕಾರಣವೆನ್ನಬಹುದಾದರೂ ಸಿಂಪ್ಸನ್, ಲಿಸ್ಟರ್ ಶಂಕಿಸುತ್ತಿರುವ ಸೂಕ್ಷ್ಮಾಣುಗಳನ್ನು ಪ್ರದರ್ಶಿಸಿದಲ್ಲದೇ ಅವನ ಸಿದ್ಧಾಂತವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂದು ಹಠ ಮಾಡಿದ. ಅಲ್ಲದೇ ಕೆಲವು ವರ್ಷಗಳ ಹಿಂದೆ ಯುರೋಪಿನಲ್ಲಿ ಲೆಮೈರೆ (*Lemaire*) ಎಂಬ ವೈದ್ಯನೂ ಕಾರ್ಬಾಲಿಕ್ ಆಮ್ಲವನ್ನು ಗಾಯಗಳಿಗೆ ಸವರಿ ವಿಫಲನಾದದ್ದನ್ನು ಉಲ್ಲೇಖಿಸಿ, ಲಿಸ್ಟರ್ ತಾನು ಈಗ ಹೊಸದಾಗಿ ಮಾಡುತ್ತಿದ್ದೇನೆಂದು ಹೇಳಿಕೊಳ್ಳುವುದು ಅವಮಾನಕರವೆಂದು ಹೀಯಾಳಿಸಿದ. ಆಸ್ಪತ್ರೆಗಳಲ್ಲಿ ಜರುಗುತ್ತಿರುವ ಗಾಯದ ನಂಜಿಗೆ ಈಗಿರುವ ಆಸ್ಪತ್ರೆಗಳನ್ನು ಸುಟ್ಟು ಹೊಸದಾಗಿ ನಿರ್ಮಿಸುವುದೇ ಅವುಗಳ ನಿವಾರಣೆಗೆ ಪರಿಹಾರವೆಂಬ ವಿಚಿತ್ರವಾದವನ್ನು ಮುಂದಿಟ್ಟನು.

ಆ ಕಾಲದಲ್ಲಿ ಸಿಂಪ್ಸನ್‌ಗೆ ವೈದ್ಯಲೋಕದಲ್ಲಿದ್ದ ಪ್ರತಿಷ್ಠೆ ಮತ್ತು ಪ್ರಭಾವದೆದುರಿನಲ್ಲಿ ಅವನನ್ನು ಅಲ್ಲಿ ಯಾರೂ ಬಹಿರಂಗವಾಗಿ ವಿರೋಧಿಸಿ ಲಿಸ್ಟರ್‌ಗೆ ಬೆಂಬಲ ತೋರಿಸಲಿಲ್ಲ. ಅನಂತರ ಮಾತಾಡಿದ ಹಲವರು ಅವನನ್ನೇ ಬೆಂಬಲಿಸಿ ತಮ್ಮಲ್ಲಿನ ಅಂಧಕಾರ ಮತ್ತು ಬಾಲಬುಡುಕತನ ವ್ಯಕ್ತಪಡಿಸಿದರು. ಆದರೂ ಕೆಲವು ವೈದ್ಯರು ಸಮ್ಮೇಳನಾನಂತರ ಲಿಸ್ಟರ್‌ನನ್ನು ಸಂಧಿಸಿ ಅವನ ಸಿದ್ಧಾಂತದ ಬಗೆಗೆ ನಂಬಿಕೆ ತೋರಿಸಿ, ಅವುಗಳನ್ನು ತಮ್ಮ ಆಸ್ಪತ್ರೆಗಳಲ್ಲಿ ಆಚರಿಸುವ ಭರವಸೆಯಿತ್ತರು.

ಡಬ್ಲಿನ್ ಸಮ್ಮೇಳನದ ನಂತರವೂ ಆಂಟಿಸೆಪ್ಟಿಕ್ ನಿಯಮಗಳ ಬಗೆಗೆ ಪತ್ರಿಕೆಗಳಲ್ಲಿ ಜಿಜ್ಞಾಸೆಗಳಾರಂಭವಾದವು. ಹೆಚ್ಚಿನ ಲೇಖನಗಳಲ್ಲಿ ಗಾಯಗಳಿಗೆ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದೇ ಮುಖ್ಯ ವಿಷಯವಾಗಿರುತ್ತಿತ್ತೇ ಹೊರತು, ಇತರ ಆಂಟಿಸೆಪ್ಟಿಕ್ ನಿಯಮಗಳ ಆಚರಣೆಯ ಬಗೆಗೆ ಯಾರೂ ಆಸಕ್ತಿ ತೋರಿಸುತ್ತಿರಲಿಲ್ಲ. ಲಿಸ್ಟರ್ ಆ ಬಗೆಗೆ ಸೂಕ್ತವಿವರಣೆ ಕೊಟ್ಟರೂ ಅದು ಅವರೆಲ್ಲರ ಗಮನಕ್ಕೆ ಬರುತ್ತಿರಲಿಲ್ಲ.

ಸಿಂಪ್ಸನ್ ಸಹಾ ಈ ಜಿಜ್ಞಾಸೆಗಳಲ್ಲಿ ಭಾಗವಹಿಸಲು ಹಿಂಜರಿಯಲಿಲ್ಲ. ''ಡೈಲಿ ರಿವ್ಯೂ'' ಪತ್ರಿಕೆಯಲ್ಲಿ ಮೊದಲು ಗುಪ್ತನಾಮಧೇಯನಾಗಿ ಲೇಖನ ಬರೆದು ಲೆಮ್ಮೈರೆಯ ಪ್ರಯೋಗಗಳ ವಿಫಲತೆ ಮತ್ತು ಆ ಬಗ್ಗೆ ಲೆಮ್ಮೈರೆ ಪ್ರಕಟಿಸಿದ ೭೦೦ ಪುಟಗಳ ಪುಸ್ತಕದ ಆಧಾರವನ್ನು ಉಲ್ಲೇಖಿಸಿದ್ದ, ಅಲ್ಲದೇ ಈ ಲೇಖನದ ಸುತ್ತೋಲೆಗಳನ್ನು ಇತರ ಖ್ಯಾತ ವೈದ್ಯರಿಗೆ ಕಳುಹಿಸಲೂ ಸಿಂಪ್ಸನ್ ಹೆದರಲಿಲ್ಲ.

'ಡೈಲಿ ರಿವ್ಯೂ'ನ ಲೇಖನವನ್ನು ಓದಿದ ಲಿಸ್ಟರ್ ಬಹಳ ಪ್ರಯಾಸದಿಂದ ಲೆಮ್ಮೈರೆ ಬರೆದ ಪುಸ್ತಕದ ಪ್ರತಿಯೊಂದನ್ನು ತರಿಸಿ ಅಭ್ಯಸಿಸಿದ. ಅದರಿಂದ ಲೆಮ್ಮೈರೆ ಕೋಲ್‌ಟಾರ್‌ನಿಂದ ಕಾರ್ಬಾಲಿಕ್ ಆಮ್ಲವನ್ನು ಪ್ರತ್ಯೇಕಿಸುವಲ್ಲಿ ಯಶಸ್ವಿಯಾಗಿದ್ದ. ಆಮ್ಲವನ್ನು ಕೆಲವು ಗಾಯಗಳಿಗೆ ಹಚ್ಚಿ, ಸ್ವಲ್ಪಮಟ್ಟಿನ ಒಳ್ಳೆಯ ಫಲಿತಾಂಶ ಪಡೆದಿದ್ದರೂ, ಇತರ ಆಂಟಿಸೆಪ್ಟಿಕ್ ನಿಯಮಗಳನ್ನು ಅನುಸರಿಸದಿದ್ದುದರಿಂದ ಮುಂದೆ ಅವನಿಗೆ ಒಳ್ಳೆಯ ಫಲಿತಾಂಶಗಳು ದೊರೆತಿರಲಿಲ್ಲ. ಲಿಸ್ಟರ್ ಈ ವಿಷಯಗಳನ್ನೊಳಗೊಂಡ ಲೇಖನವೊಂದನ್ನು 'ಲ್ಯಾನ್ಸೆಟ್'ನಲ್ಲಿ ಬರೆದು ಕಾರ್ಬಾಲಿಕ್ ಆಮ್ಲದ ಬಳಕೆಯ

ಆದ್ಯತೆಗೆ ತಾನು ಶ್ರಮಿಸುತ್ತಿಲ್ಲವೆಂದು ತಿಳಿಸಿ. ಜೊತೆಗೆ ಶುಚಿತ್ವದ ನಿಯಮ ಗಳ -ಆಂಟಿಸೆಪ್ಟಿಕ್-ಆಚರಣೆಯಿಂದ ರೋಗಿಗಳಲ್ಲಿ ಒಳ್ಳೆಯ ಫಲಿತಾಂಶ ಕೊಡುತ್ತವೆಂಬುದೇ ತನ್ನ ಸಿದ್ಧಾಂತವೆಂದು ನಮ್ರತೆಯಿಂದ ನಿವೇದಿಸಿ ಕೊಂಡಿದ್ದ.

ಲಿಸ್ಟರ್‌ನ ಲೇಖನ ಲ್ಯಾನ್ಸೆಟ್‌ನಲ್ಲಿ ಪ್ರಕಟವಾದ ನಂತರ ಸಿಂಪ್ಸನ್ ತನ್ನ ಗುಪ್ತ ನಾಮಧೇಯವನ್ನು ಕಳಚಿ ಬಹಿರಂಗವಾಗಿ ವಾದ ವಿವಾದ ಕ್ಕಿಳಿದ. ಲೆಮೈರೆಯ ನಂತರ ಯುರೋಪಿನ ಇತರ ವೈದ್ಯರೂ ಕಾರ್ಬಾ ಲಿಕ್ ಆಮ್ಲವನ್ನೇ ಲೇಪಿಸಿ ವಿಫಲವಾಗಿದ್ದಾರೆಂದು ಹೇಳಿ, ಲಿಸ್ಟರ್ ಮತ್ತೇ ಅದನ್ನೇ ಅನುಸರಿಸುತ್ತಿರುವುದಕ್ಕೆ ಛೀಮಾರಿ ಮಾಡಿದ. ಗಾಯಗಳಲ್ಲಿ ಕೀವಾಗುವುದನ್ನು ತಡೆಯಲು ಅವನು ನಿರೂಪಿಸಿದ ಲೋಹದ ಕ್ಲಿಪ್ (*Metalic Clips*) ಗಳನ್ನು ಬಳಸುವುದು ಉತ್ತಮ ಮಾರ್ಗವೆಂದು ಪ್ರತಿಪಾದಿಸಿದ್ದ. ಆ ಕಾಲದ ಇನ್ನೊಬ್ಬ ಪ್ರತಿಷ್ಠೆಯ ಶಸ್ತ್ರವೈದ್ಯನೆನಿಸಿದ ಜೇಮ್ಸ್ ಪೆಜೆಟ್, ಲಿಸ್ಟರ್‌ನ ವಿಧಾನವನ್ನು ಕ್ರಮವರಿತು ಅನುಸರಿಸದೆ, ಒಳ್ಳೆಯ ಫಲಿತಾಂಶಗಳನ್ನು ಹೊಂದಿರಲಿಲ್ಲ, ಅವನೂ ಸಹಾ ಸಿಂಪ್ಸನ್‌ಗೆ ಬೆಂಬಲ ನೀಡಿ ಲೇಖನಗಳನ್ನು ಬರೆದನು. ಆ ಕಾಲದ ಇಂಗ್ಲೆಂಡ್‌ನ ವೈದ್ಯಕೀಯ ಪ್ರಪಂಚ "ಕಾರ್ಬಾಲಿಕ್ ಆಮ್ಲ ಮತ್ತು ವಾಗ್ವಾದ" (*Carbolic Acid And Controversy*) ದಿಂದ ತುಂಬಿತ್ತೆಂದರೆ ಅತಿಶಯೋಕ್ತಿಯಾಗಲಾರದು !

ವೈದ್ಯಕೀಯ ಕ್ಷೇತ್ರದಲ್ಲಿ ತನ್ನ ಸಿದ್ಧಾಂತಗಳ ಬಗೆಗೆ ಪ್ರಬಲ ವಿರೋಧವಿದ್ದು ಕಟುವಾದ ಟೀಕೆಗಳಾಗುತ್ತಿದ್ದರೂ ಲಿಸ್ಟರ್ ಆಂಟಿಸೆಪ್ಟಿಕ್ ನಿಯಮಗಳ ಆಚರಣೆಯನ್ನು ಬಿಡಲಿಲ್ಲ. ಈ ಮಧ್ಯೆ ಕಾರ್ಬಾಲಿಕ್ ಆಮ್ಲದ ವ್ಯಾಪಕ ಬಳಕೆ ಅವನ ಸಿಬ್ಬಂದಿಗಳಲ್ಲನೇಕರಿಗೆ ತಲೆನೋವು, ಕೆಮ್ಮು ಮತ್ತು ಕೈಗಳಲ್ಲಿ ಸುಟ್ಟಗಾಯಗಳೂ ಆಗುವಂತೆ ಮಾಡುತ್ತಿತ್ತು. ಇವುಗಳನ್ನು ಕಡಿಮೆ ಮಾಡಲು ಮತ್ತು ವಾತಾವರಣದಲ್ಲಿರಬಹುದಾದ ಸೂಕ್ಷ್ಮಾಣುಗಳ ನಾಶಕ್ಕಾಗಿ ಶಸ್ತ್ರ ಚಿಕಿತ್ಸಾ ಕೊಠಡಿಯಲ್ಲಿ ಸದಾ ಕಾರ್ಬಾಲಿಕ್ ಆಮ್ಲದ ವಾತಾವರಣವಿರುವಂತೆ ಮಾಡಲು ಅದನ್ನು ಸ್ಪ್ರೇ ಪಂಪ್ (*Spray Pump*) ನಿಂದ ಸದಾ ಸಿಂಪಡಿಸುವ ವ್ಯವಸ್ಥೆ ಮಾಡಿದನು. ಅವು

ಗಳಿಂದಲೂ ನಿರೀಕ್ಷಿಸದ ಪರಿಣಾಮಬಾರದಿದ್ದರೂ ತನ್ನ ನಿಯಮಗಳನ್ನು ಮಾತ್ರ ಸಡಿಲಗೊಳಿಸಲಿಲ್ಲ.

ಗಾಯಗಳಲ್ಲಿ ಕೀವಾಗುತ್ತಿದ್ದುದಕ್ಕೆ ಆ ಕಾಲದಲ್ಲಿ ಶಸ್ತ್ರ ವೈದ್ಯರು ರಕ್ತನಾಳಗಳನ್ನು ಕಟ್ಟುತ್ತಿದ್ದ ದಾರಗಳನ್ನು ಬಹಳ ಉದ್ದವಾಗಿ ಬಿಟ್ಟು ಅವು ಗಾಯದ ಹೊರಗಡೆ ನೇತಾಡುವಂತೆ ಬಿಡುತ್ತಿದ್ದುದೂ ಒಂದು ಕಾರಣ ವೆನ್ನಬಹುದು. ಈ ಸಮಸ್ಯೆಗೆ ಪರಿಹಾರ ಕಂಡು ಹಿಡಿಯುವುದೂ ಲಿಸ್ಟರ್‌ನ ಯೋಚನಾಲಹರಿಯಲ್ಲಿ ಸೇರಿತು, ೧೮೬೮ರ ಕ್ರಿಸ್‌ಮಸ್‌ನಲ್ಲಿ ತಾಯಿ ತಂದೆಯವರ ಜೊತೆಗೆ ಹಾಯಾಗಿ ಕಾಲ ಕಳೆಯಲು ಅವರ ಊರಿಗೆ ಹೋದಾ ಗಲೇ ಈ ಬಗ್ಗೆ ಪ್ರಯೋಗ ನಡೆಯಿತು.

ಶರೀರದ ಒಳಗಡೆ ರಕ್ತನಾಳಗಳನ್ನು ಕಟ್ಟಲು ಆಗ ತಾನೆ ಜಾರಿಗೆ ಬರುತ್ತಿದ್ದ ಪ್ರಾಣಿ ಸಂಬಂಧ ದಾರ (*Cat Gut*) ವನ್ನು ಉಪಯೋಗಿ ಸುತ್ತಿದ್ದರು. ಅವು ಶರೀರದೊಳಗಡೆ ಹೆಚ್ಚು ಕಾಲ ಉಳಿಯದೆ ಕರಗುತ್ತಿ ದ್ದುದರಿಂದ ವ್ಯಾಪಕವಾಗಿ ಬಳಸುವಂತಿರಲಿಲ್ಲ. ಅಲ್ಲದೆ ಅವುಗಳ ಬಳಕೆ ಯಿಂದಲೇ ಕೀವಾಗುತ್ತಿದ್ದುದೂ ಸಾಮಾನ್ಯವಾಗಿತ್ತು. ಲಿಸ್ಟರ್ ಅಂತಹ ದಾರಗಳನ್ನು ಕಾರ್ಬಾಲಿಕ್ ಆಮ್ಲದಲ್ಲಿ ಕೆಲವು ಗಂಟೆಗಳ ಕಾಲ ತೋಯಿ ಸಿಟ್ಟು, ಕರುವೊಂದಕ್ಕೆ ಪ್ರಾಯೋಗಿಕ ಶಸ್ತ್ರ ಚಿಕಿತ್ಸೆ ನಡೆಸಿ ಆಧಾರದಿಂದ ರಕ್ತನಾಳಗಳನ್ನು ಬಿಗಿದನು. ಒಂದು ತಿಂಗಳ ನಂತರ ಆ ಗಾಯವನ್ನು ಬಿಡಿಸಿ ನೋಡಿದಾಗ ಅಲ್ಲಿ ಕೀವು ಆಗಿರಲಿಲ್ಲ. ದಾರವೂ ಕರಗಿ ಹೋಗಿತ್ತು. ನಂತರ ಈ ಪದ್ಧತಿಯೂ ಬಳಕೆಗೆ ಬರುವಂತಾಯಿತು.

## ವಿದೇಶಗಳಲ್ಲಿ ಮಾನ್ಯತೆ :

ಡಬ್ಲಿನ್ ಸಮ್ಮೇಳನದಲ್ಲಿ ಲಿಸ್ಟರ್‌ನ ಭಾಷಣ ಕೇಳಿದ ಹಾಗೂ ಅವನ ಲೇಖನಗಳನ್ನು ಓದಿದ ಕೆಲವು ಯುರೋಪಿನ ವೈದ್ಯರು ಆಂಟಿ ಸೆಪ್ಟಿಕ್ ನಿಯಮಗಳನ್ನು ತಮ್ಮ ಕಾರ್ಯಕ್ಷೇತ್ರದಲ್ಲಿ ಅಳವಡಿಸಿದರು. ಚರ್ಮವನ್ನು ಕಸಿ ಮಾಡುವುದರಲ್ಲಿ (*Skin Grafting*) ಮೊದಲಿಗ ನೆಂದು ಹೆಸರಾದ ಲೆಪ್‌ಜಿಗ್ (ಜರ್ಮನಿ) ವಿಶ್ವವಿದ್ಯಾನಿಲಯದ ಕಾರ್ಲ್ ಥಿಯರ್ಸ್ಚ್ (*Carl Theirsch*) ಆಂಟಿಸೆಪ್ಟಿಕ್ ನಿಯಮಗಳನ್ನು ಕಟ್ಟು

ಸಿಟ್ಟಾಗಿ ಅನುಸರಿಸಿ ಒಳ್ಳೆಯ ಫಲಿತಾಂಶಗಳನ್ನು ಪಡೆದನು. ನಂಜಿನ ಜ್ವರ ಅವನ ಆಸ್ಪತ್ರೆಯಲ್ಲಿ ಮಾಯವಾಯಿತು. ಆ ಬಗೆಗೆ ಅವನು ಲೇಖನಗಳನ್ನು ಪ್ರಕಟಿಸಿದ. ಬರ್ಲಿನ್ ಆಸ್ಪತ್ರೆಯ ನಿರ್ದೇಶಕ ಬಾರ್ಡೆಲ್‌ಬೆನ್ ಆಂಟಿಸೆಪ್ಟಿಕ್ ನಿಯಮಗಳನ್ನು ಅಭ್ಯಸಿಸಲು ತನ್ನ ಸಹಾಯಕನನ್ನು ಗ್ಲಾಸ್ಗೋ ಆಸ್ಪತ್ರೆಗೆ ಕಳುಹಿಸಿ ನಂತರ ಆ ನಿಯಮಗಳನ್ನು ತನ್ನ ಆಸ್ಪತ್ರೆಯಲ್ಲಿ ಜಾರಿಗೆ ತಂದು ಒಳ್ಳೆಯ ಫಲಿತಾಂಶಗಳನ್ನು ಪ್ರದರ್ಶಿಸಿದನು. ಯುರೋಪಿನ ಇತರ ಖ್ಯಾತ ಶಸ್ತ್ರವೈದ್ಯರಾದ ವೋಲ್ಕ್‌ಮ್ಯಾನ್, ನುಸ್‌ಬಾಮ್, ಆಗಸ್ಟ್ ಸೋಶಿನ್ ಮೊದಲಾದವರೂ ಸಹಾ ಆಂಟಿಸೆಪ್ಟಿಕ್ ನಿಯಮಗಳನ್ನು ಅನುಸರಿಸಿ ಒಳ್ಳೆಯ ಫಲಿತಾಂಶ ದೊರಕಿಸಿಕೊಂಡರು. ಆದರೆ ಸ್ವದೇಶದಲ್ಲಿ ಆಂಟಿಸೆಪ್ಟಿಕ್ ನಿಯಮಗಳ ವಿರೋಧ ಕಡಿಮೆಯಾಗಲಿಲ್ಲ.

**ಎಡಿನ್‌ಬರೋ :**

ಗ್ಲಾಸ್ಗೋ ನಂತಹ ಸಣ್ಣ ಪಟ್ಟಣವು ತನ್ನ ಪ್ರಯೋಗಗಳ ವ್ಯಾಪಕ ಪ್ರಚಾರಕ್ಕೆ ಸರಿಯಾದ ಸ್ಥಳವಲ್ಲವೆಂದು ಲಿಸ್ಟರ್ ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಖಾಲಿಯಿದ್ದ ಶಸ್ತ್ರವಿದ್ಯೆಯ ಪ್ರಾಧ್ಯಾಪಕ ಹುದ್ದೆಗೆ ಪ್ರಯತ್ನಿಸಿದ. ಆಗಿನ ವಿರೋಧಿ ವಾತಾವರಣದಿಂದ ಅದು ಸಫಲವಾಗಲಿಲ್ಲ. ಅದೇ ಸಮಯದಲ್ಲಿ ಮಾವ ಸೈಮ್ ಪಾರ್ಶ್ವವಾಯುವಿನಿಂದ ಕೆಲಸ ಮುಂದುವರಿಸುವುದು ಅಸಾಧ್ಯವಾದಾಗ ಎಡಿನ್‌ಬರೋದಲ್ಲಿ ಅವನ ಜಾಗ ಲಿಸ್ಟರ್‌ಗೆ ನಿರಾಯಾಸವಾಗಿ ಲಭಿಸಿತು. ಅಲ್ಲಿ ಅವನೂ ತನ್ನ ಪ್ರಯೋಗಗಳಿಂದ ಸೈಮ್‌ಗಿಂತಲೂ ಒಳ್ಳೆಯ ಫಲಿತಾಂಶ ತೋರಿಸಿದರೂ, ಕೆಲವು ಸಹೋದ್ಯೋಗಿಗಳು ಅವನನ್ನು ಅನುಮಾನದಿಂದಲೇ ನೋಡುತ್ತಿದ್ದರು. ಎಡಿನ್‌ಬರೋದಲ್ಲಿ ಕಲಿಯುತ್ತಿದ್ದ ವೈದ್ಯಕೀಯ ವಿದ್ಯಾರ್ಥಿಗಳೇ "ಕೀವಾಗುವುದು ಶುಭ ಸೂಚನೆ"ಯಲ್ಲವೆಂಬುದನ್ನು ಪ್ರಥಮ ಬಾರಿಗೆ ಕಲಿತವರು ! ಅಚ್ಚರಿಯನ್ನು ಕಂಡ ಆ ವಿದ್ಯಾರ್ಥಿಗಳು ಅವನನ್ನು ಆರಾಧಿಸುತ್ತಿದ್ದರಲ್ಲದೆ, ಅವನ ನಿಯಮಗಳನ್ನು ಅಭ್ಯಾಸಿಸಲು ಹೊರದೇಶಗಳಿಂದ ಬರುತ್ತಿದ್ದ ವೈದ್ಯರ ತಂಡವನ್ನು ನೋಡಿ ಹೆಮ್ಮೆ ಪಟ್ಟುಕೊಳ್ಳುತ್ತಿದ್ದರು.

ಯುರೋಪಿನ ಹಲವಾರು ವಿಶ್ವವಿದ್ಯಾನಿಲಯದ ಆಸ್ಪತ್ರೆಗಳಲ್ಲಿ

ಆಂಟಿಸೆಪ್ಟಿಕ್ ನಿಯಮಗಳು ಜಾರಿಗೆ ಬಂದಿದ್ದು, ಲಿಸ್ಟರ್‌ಗೆ ಹಲವು ಕಡೆಗಳಿಂದ ಯುರೋಪನ್ನು ಸಂದರ್ಶಿಸಲು ಆಹ್ವಾನಗಳು ಬರುತ್ತಿದ್ದವು. ಸ್ವದೇಶದಲ್ಲಾಗುತ್ತಿದ್ದ ಅವಮಾನದಿಂದ ಬೇಸತ್ತಿದ್ದ ಲಿಸ್ಟರ್, 1875ರಲ್ಲಿ ಯುರೋಪಿನ ಪ್ರಯಾಣ ಕೈಗೊಂಡ. ಲೆಪ್‌ಜಿಗ್‌ನಲ್ಲಿ ಅವನನ್ನು ಗೌರವಿಸಿ ಅವನೊಬ್ಬ ಮಾನವ ಜನಾಂಗದ ಉದ್ಧಾರಕನೆಂದು ಮುಕ್ತಕಂಠದಿಂದ ಹೊಗಳಿದರು. ಯುರೋಪ್ ಪ್ರವಾಸದಿಂದ ಉತ್ತೇಜಿತನಾದ ಲಿಸ್ಟರ್ ಅಮೆರಿಕಾಕ್ಕೂ ಕೆಲ ಕಾಲ ಭೇಟಿ ನೀಡಿದ. ಅಲ್ಲಿಯೂ ಆದರದ ಸ್ವಾಗತ ಕಾದಿತ್ತು. ಫಿಲಡೆಲ್ಫಿಯಾ, ಬೋಸ್ಟನ್ ಮತ್ತು ನ್ಯೂಯಾರ್ಕ್ ನಗರಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿ ಎಲ್ಲರ ಮೆಚ್ಚುಗೆಗೆ ಪಾತ್ರನಾದನು.

**ಲಂಡನ್ :**

ಹೊರದೇಶಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳಿಗೆ ಮಾನ್ಯತೆ ದೊರೆತಿದ್ದು, ಅಲ್ಲಿ ಅವನನ್ನು ಹಾಡಿ ಹೊಗಳುತ್ತಿದ್ದರೂ ಸ್ವದೇಶದಲ್ಲಿನ ವಿರೋಧ ಕಡಿಮೆಯಾಗುವಂತಿರಲಿಲ್ಲ. ಲಂಡನ್‌ನಂತಹ ಮಹಾ ನಗರದ ಆಸ್ಪತ್ರೆಯಲ್ಲಿ ತನ್ನ ಪ್ರಯೋಗಗಳು ಪ್ರದರ್ಶಿಸುವಂತಾದರೆ ಹೆಚ್ಚಿನ ಮಾನ್ಯತೆ ದೊರೆಯಬಹುದೆಂಬ ಹಂಬಲವಂತೂ ಲಿಸ್ಟರ್‌ನಿಂದ ದೂರ ಸರಿಯಲಿಲ್ಲ. ಸತತ ಪ್ರಯತ್ನದಿಂದ ಲಂಡನ್‌ನ ಕಿಂಗ್ಸ್ ಕಾಲೇಜಿನಲ್ಲಿ ಆಗ ತಾನೆ ಖಾಲಿಯಾದ ಪ್ರಾಧ್ಯಾಪಕ ಸ್ಥಾನಕ್ಕೆ ಕಟು ಟೀಕೆಗಳ ಮಧ್ಯೆ ಲಿಸ್ಟರ್ ನೇಮಕಗೊಂಡನು.

ಅಕ್ಟೋಬರ್ (1877) ಒಂದನೆ ದಿನಾಂಕ ವೈದ್ಯಕೀಯ ವಿದ್ಯಾರ್ಥಿಗಳಿಗೆ ಲಿಸ್ಟರ್‌ನ ಮೊದಲ ಭಾಷಣದ ಏರ್ಪಾಟಾಗಿತ್ತು. ವಿದ್ಯಾರ್ಥಿಗಳಿಗೆ ತನ್ನ ಸಿದ್ಧಾಂತದ ಹಿನ್ನೆಲೆಯನ್ನು ಮನದಟ್ಟು ಮಾಡಲು ಲಿಸ್ಟರ್, ಪ್ಯಾಶ್ಚರ್ ಪರ್ಮೆಂಟೇಷನ್ ಕ್ರಿಯೆಯನ್ನು ದ್ರಾಕ್ಷಾರಸವಿರುವ ಫ್ಲಾಸ್ಕ್‌ಗಳನ್ನು ಮೇಜಿನ ಮೇಲೆ ಅಳವಡಿಸಿಕೊಂಡು ಪಾಠಗಳನ್ನು ಪ್ರಾರಂಭಿಸುತ್ತಿದ್ದಂತೆಯೇ, ವಿದ್ಯಾರ್ಥಿಗಳು ''ಕೊಠಡಿಯ ಕಿಟಕಿ, ಬಾಗಿಲುಗಳನ್ನು ಮುಚ್ಚಿ, ಸೂಕ್ಷ್ಮಾಣುಗಳು ಒಳಗೆ ಬಂದಾವು'' ಎಂದು ಗೇಲಿ ಮಾಡಿ ಕೇಕೆ

ಹಾಕಿದರು ! ಲಿಸ್ಟರ್ ಮತ್ತು ಅವನ ಆಂಟಿಸೆಪ್ಟಿಕ್ ನಿಯಮಗಳಿಗೆ ಆಗಲೂ ಎಷ್ಟು ತಾತ್ಸಾರ ಮತ್ತು ವಿರೋಧವಿತ್ತು ಎಂಬುದರ ಪ್ರತೀಕವಿದು. ಈ ವಿರೋಧವನ್ನು ಅರಿತ ಲಿಸ್ಟರ್ ಲಂಡನ್‌ನಲ್ಲಿ ತನ್ನ ತತ್ವಗಳ ಸರಿಯಾದ ಆಚರಣೆಯನ್ನು ನೋಡಿಕೊಳ್ಳಲು ತನ್ನನಂಬಿಕೆಯ ನಾಲ್ಕು ಜನ ಅನುಯಾಯಿಗಳನ್ನು ಕರೆದು ತಂದಿದ್ದ.

**ರಾಬರ್ಟ್ ಕಾಕ್‌ನ ಸಂಶೋಧನೆ :**

ಲಿಸ್ಟರ್, ತನ್ನ ಸಿದ್ಧಾಂತಗಳನ್ನು ಪ್ರಾಯೋಗಿಕವಾಗಿ ಯಶಸ್ಸಿನಿಂದ ಮಾಡುತ್ತಿದ್ದರೂ, ಅವನು ಮತ್ತು ಅವನಿಗೆ ಸ್ಫೂರ್ತಿ ನೀಡಿದ್ದ ಪ್ಯಾಶ್ಚರ್ ಸಹಾ, ತಾವು ಶಂಕಿಸುತ್ತಿದ್ದ ಸೂಕ್ಷ್ಮಾಣುಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸುವಲ್ಲಿ ವಿಫಲರಾಗಿದ್ದರು. ಈ ಕೆಲಸವನ್ನು ಜರ್ಮನಿಯ ವೋಲ್‌ಸ್ಟೀನ್‌ನ ಜಿಲ್ಲಾ ವೈದ್ಯಾಧಿಕಾರಿ ರಾಬರ್ಟ್ ಕಾಕ್ (*RobertKoch*) ಮಾಡಿ ತೋರಿಸಿದ (೧೮೭೭), ಲಿಸ್ಟರ್ ಇಂಗ್ಲೆಂಡ್‌ನಲ್ಲಿ ತನ್ನ ತತ್ವಗಳ ಪ್ರತಿಪಾದನೆಗೆ ಹೆಣಗುತ್ತಿರುವ ಸಮಯದಲ್ಲೇ ವೋಲ್‌ಸ್ಟೀನಲ್ಲಿ ಕುರಿಗಳ ಆಂಥ್ರಾಕ್ಸ್ (*Anthrax*) ರೋಗಕ್ಕೆ ಸೂಕ್ಷ್ಮಾಣುಗಳೇ ಕಾರಣವೆಂಬುದನ್ನು ಆಗ ತಾನೇ ಪ್ರಚಾರಕ್ಕೆ ಬಂದಿದ್ದ ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ತೋರಿಸಿದ. ಅವನ ಮುಂದುವರಿದ ಸಂಶೋಧನೆಗಳಿಂದ ಮನುಷ್ಯರ ಗಾಯಗಳಲ್ಲಿ ಕೀವಾಗುವುದಕ್ಕೆ ಕಾರಣವಾಗುವ ಸ್ಟೆಫೈಲೋಕಾಕೈ(*Staph-ylococci*) ಸ್ಟ್ರೆಪ್ಟೋಕಾಕೈ(*Streptococcci*) ಮುಂತಾದುವುಗಳನ್ನು ಬಯಲಿಗೆಳೆದ. ಮಾನವ ಜನಾಂಗಕ್ಕೆ ಇನ್ನೂ ಕಂಟಕ ಪ್ರಾಯವಾಗಿರುವ ಕ್ಷಯ ರೋಗದ ಸೂಕ್ಷ್ಮಾಣು (*Tuberculosis Bacilli*)ಗಳನ್ನು ಸಹಾ ಕಾಕ್ ಕಂಡು ಹಿಡಿದು ನೋಬೆಲ್ ಪ್ರಶಸ್ತಿಗಳಿಸಿದ್ದಲ್ಲದೆ, ಮಾನವ ಕುಲಕ್ಕೆ ಉಪಕಾರ ಮಾಡಿದ.

ರೋಗಕಾರಕ ಸೂಕ್ಷ್ಮಾಣುಗಳು ಮುಂದೆ ಒಂದಾದರೊಂದರಂತೆ, ವೈದ್ಯ ವಿಜ್ಞಾನಿಗಳ ಬಲೆಗೆ ಬಿದ್ದು ಸೂಕ್ಷ್ಮ ಜೀವಾಣುಗಳ ಪ್ರಪಂಚವಿರುವುದು ಬಹಿರಂಗವಾಯಿತು. ಇದರಿಂದ ಪ್ಯಾಶ್ಚರ್ ಮತ್ತು ಲಿಸ್ಟರ್‌ನ ಸಿದ್ಧಾಂತಗಳಿಗೆ ಅಪಾರ ಸಹಾಯವಾಯಿತು. ವೈದ್ಯ ಲೋಕದ ಪ್ರತಿಷ್ಠರ

ಕಣ್ಣು ತೆರೆಯುವಂತಾಯಿತು. ಈ ಸಮಯದಲ್ಲೂ ವಿಯೆನ್ನಾದ ಖ್ಯಾತ ವೈದ್ಯ ಬಿಲ್ರಾತ್(*Billroth*)ನ ನೇತೃತ್ವದಲ್ಲಿ "ಹಿಂಗಾಪು ಕದನ"ವೂ (*Reargaurd Action*) ನಡೆಯಿತು. ಕೀವಾಗುವುದಕ್ಕೆ, ಗಾಯಗಳಲ್ಲಿ ಉರಿಯೂತವಾದಾಗ ಹುಳಿಯಾಗುವಿಕೆ [*phlogistic Zymoid*] ಕಾರಣವೆಂದು ಹೊಸ ವಾದವನ್ನು ಮುಂದಿಟ್ಟರು. ಆದರೆ ಆಂಟಿಸೆಪ್ಟಿಕ್ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದವರಿಗೆ ಸೂಕ್ಷ್ಮಾಣುಗಳ ಪ್ರದರ್ಶನದ ಮುಂದೆ ಈ ವಾದಗಳಲ್ಲಿ ಹುರುಳಿಲ್ಲವೆಂಬುದರ ಅರ್ಥವಾಗಿರಬೇಕು. ಕಾಲಕ್ರಮೇಣ ಅವರೆಲ್ಲಾ ಹಿಂಜರಿದು ಲಿಸ್ಟರ್‌ನ ತತ್ವಗಳು ವ್ಯಾಪಕವಾಗಿ ಬಳಕೆಗೆ ಬಂದವು.

ಇನ್ನು ಕಾರ್ಬಲಿಕ್ ಆಮ್ಲದ ವ್ಯಾಪಕ ಬಳಕೆಯಿಂದ ಆಸ್ಪತ್ರೆಗಳ ಸಿಬ್ಬಂದಿ ಹಾಗೂ ರೋಗಿಗಳಲ್ಲಿ ಕೆಲವು ದುಷ್ಪರಿಣಾಮಗಳಾಗುತ್ತಿರುವುದನ್ನು ತಡೆಗಟ್ಟಲು ಹಲವಾರು ವೈದ್ಯರು ಶ್ರಮಿಸಿದರು. ಆದರ ವಿವಿಧ ಪ್ರಮಾಣದ ದ್ರಾವಣಗಳನ್ನು ಮಾಡಿ ಉಪಯೋಗಿಸಿದರು. ಅದೇ ಗುಣವಿರುವ ಇತರ ರಸಾಯನಿಕಗಳ ಶೋಧನೆ ನಡೆಯಿತು. ಶಸ್ತ್ರ ಚಿಕಿತ್ಸಾ ಕೊಠಡಿ ಮತ್ತು ಸಲಕರಣೆಗಳ ಸ್ವಚ್ಛತೆಗೆ ಹೆಚ್ಚಿನ ಗಮನ ಹರಿಯಿತು. ಬಿಸಿಯಾದ ಹಬೆ [*Steam*] ಯಲ್ಲಿ ಸಲಕರಣೆ ಮತ್ತು ಬಟ್ಟೆಗಳನ್ನು ನಿಯಮಿತ ಕಾಲ ಬಿಟ್ಟರೆ ಸೂಕ್ಷ್ಮಾಣುಗಳು ನಾಶವಾಗುತ್ತದೆಂಬುದು ತಿಳಿದುಬಂತು. ಹೆಚ್ಚು ಒತ್ತಡದ ಹಬೆ [*High Pressure Steam*]ನ ಬಳಕೆಯಿಂದ ಕೆಲವೇ ನಿಮಿಷಗಳಲ್ಲಿ ಜೀವಿ ಶುದ್ಧೀಕರಣ [*Sterilization*] ಮಾಡಬಹುದೆಂಬ ತತ್ವ ತಿಳಿದು ಹೊಸ ನಮೂನೆಯ ಯಂತ್ರಗಳು ತಯಾರಾದವು, ಸಿಬ್ಬಂದಿಗಳ ಕೈಸುಡುವುದನ್ನು ತಪ್ಪಿಸಲು ರಬ್ಬರ್ ಕೈಚೀಲಗಳ ಶೋಧನೆಯಾಯಿತು. ಒಂದು ಕಾಲದಲ್ಲಿ ಲಿಸ್ಟರ್ ಒಂಟಿಯಾಗಿ ನಡೆಸುತ್ತಿದ್ದ ಕಾಳಗಕ್ಕೆ ಪ್ರಪಂಚದ ಇತರ ಕಡೆಗಳಿಂದಲೂ ಯೋಧರು ಬಂದು ಸೇರೀದಂತಾಯಿತು. ೧೮೮೫ರ ಸಮಯಕ್ಕೆ ಬ್ರಿಟನ್ ಸೇರಿದಂತೆ ಪ್ರಪಂಚದ ಎಲ್ಲೆಡೆಗಳಲ್ಲೂ ಆಂಟಿಸೆಪ್ಟಿಕ್ ನಿಯಮಗಳ ಆಚರಣೆ ವ್ಯಾಪಕವಾಗಿ ಹರಡಿತು. ಆಂಟಿಸೆಪ್ಟಿಕ್ ಪದ ಮನೆಮಾತಾಯಿತು. "ಲಿಸ್ಟರಿಸಂ"(*Listerism*) ಎಂಬ ಹೊಸ ಪದದ ಜನನವಾಯಿತು.

**ಮಾನ್ಯತೆ:**

ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳ ಆಚರಣೆಯಿಂದ ಲಕ್ಷಾಂತರ ರೋಗಿಗಳಿಗೆ ಜೀವದಾನವಾಗಿದ್ದಲ್ಲದೆ ಶಸ್ತ್ರ ಚಿಕಿತ್ಸಾ ಪದ್ಧತಿ ವ್ಯಾಪಕವಾಗಿ ಊರ್ಜಿತಗೊಳ್ಳಲು ಅತ್ಯಂತ ಸಹಕಾರಿಯಾಯಿತು. ನೋವಿನ ವಿರುದ್ಧ ಮೊದಲೇ ಜಯಗಳಿಸಿದ್ದು, ಕೀವನ್ನು ತಡೆಗಟ್ಟುವ ಉಪಾಯ ಅರಿವಾದ ಮೇಲೆ ಶಸ್ತ್ರ ವೈದ್ಯರು ಹಿಂದೆಂದೂ ನಡೆಸಲಾಗದಂತಹ ಕಷ್ಟತರ ಚಿಕಿತ್ಸೆಗಳನ್ನು ಮಾಡಿ ಜಯಭೇರಿ ಬಾರಿಸಿದರು.

ಜೀವಿತ ಕಾಲದಲ್ಲೇ ತನ್ನ ಸಿದ್ಧಾಂತಗಳು ಸರ್ವಮಾನ್ಯವಾದ ಸಾರ್ಥಕತೆ ಲಿಸ್ಟರ್‌ನದು. ದೇಶ ವಿದೇಶಗಳಿಂದ ಮನ್ನಣೆ ಗೌರವ, ಸನ್ಮಾನಗಳು ಬರಲಾರಂಭಿಸಿದವು. ವಿಕ್ಟೋರಿಯಾ ಮಹಾರಾಣಿ ಇಂಗ್ಲೆಂಡ್ ಅತ್ಯುನ್ನತ ಲಾರ್ಡ್ ಪದವಿ [*Lord*] ಯನ್ನು ದಯಪಾಲಿಸಿ ಗೌರವಿಸಿದಳು. ಈ ಪದವಿಯನ್ನು ಪಡೆದ ವೈದ್ಯರಲ್ಲಿ ಅವನೇ ಮೊದಲಿಗ. ಪ್ರತಿಷ್ಠಿತ ರಾಯಲ್ ಸೊಸೈಟಿ ಅಧ್ಯಕ್ಷ ಪದವಿ, ಎಡಿನ್ ಬರೋದ ಗೌರವ ಪೌರತ್ವ ಒಂದಾದ ಮೇಲೊಂದರಂತೆ ಬಂದವು. ಪ್ರಪಂಚದಾದ್ಯಂತ ಎಂಬತ್ತು ಗೌರವ ಪದವಿಗಳು ಅವನದಾದವು.

ಮಾನವ ಜನಾಂಗಕ್ಕೆ ಕಲ್ಯಾಣಕಾರಿಯಾದ ಸಿದ್ಧಾಂತವೊಂದನ್ನು ರೂಪಿಸಿ, ಅನೇಕ ಎಡರು ತೊಡರುಗಳನ್ನು ಅನುಭವಿಸಿದರೂ, ತನ್ನ ಜೀವಿತ ಸಮಯದಲ್ಲೇ ಅದಕ್ಕೆ ಪ್ರಪಂಚದಾದ್ಯಂತ ಮಾನ್ಯತೆ ದೊರಕಿ, ಕೀರ್ತಿ ಗೌರವಗಳಿಗೆ ಪಾತ್ರವಾದ ಸಾರ್ಥಕ ಜೀವನ ಲಾರ್ಡ್ ಜೋಸೆಫ್ ಲಿಸ್ಟರ್‌ನದು. ಅವನು ಅತ್ಯುನ್ನತ ಶಿಖರಕ್ಕೇರಿದ್ದರೂ. ಸೌಜನ್ಯ, ಸರಳತೆ ಮತ್ತು ಕ್ವೇಕರ್ ಮನೆತನದ ಧಾರ್ಮಿಕ ಮನೋಭಾವ ಲಿಸ್ಟರ್‌ನಲ್ಲಿ ಸದಾ ನೆಲೆಸಿದ್ದವು, ವಿನಯವೇ ಮೂರ್ತಿವೆತ್ತಂತ ವ್ಯಕ್ತಿತ್ವ.

ತನ್ನ ತತ್ವಗಳಿಗೆ ವಿಶ್ವಮಾನ್ಯತೆ ದೊರೆತಿದ್ದರೂ ಯಶಸ್ಸಿಗೆ ಮೂಲ ಕಾರಣವೆನಿಸಿದ ಲೂಯಿ ಪ್ಯಾಶ್ಚರ್‌ನ ಸಂಶೋಧನೆಗಳಿಂದಾದ ಉಪಕಾರ ಸ್ಮರಣೆ ಸದಾ ಅವನಲ್ಲಿ. ಪ್ಯಾಶ್ಚರ್‌ನ ಎಪ್ಪತ್ತನೇ ಹುಟ್ಟುಹಬ್ಬದ ಆಚರಣೆಗೆ ರಾಯಲ್ ಸೊಸೈಟಿಗಳ ಪ್ರತಿನಿಧಿಯಾಗಿ ಸೋರ್‌ಬೋರ್ನ್ ನಗರಕ್ಕೆ (೧೮೯೨) ಲಿಸ್ಟರ್ ಹೋಗಿ ತನ್ನ ಗೌರವ ಸೂಚಿಸಿದ. ಪಾಶ್ವ

ವಾಯುಪೀಡಿತನಾದ ಪ್ಯಾಶ್ಚರ್‌ನನ್ನು ತಾನೇ ಸ್ವತಃ ಫ್ರಾನ್ಸಿನ ಅಧ್ಯಕ್ಷರೊಡಗೂಡಿ ವೇದಿಕೆಗೆ ಎತ್ತಿಕೊಂಡು ಹೋಗಿ ಅಪ್ಪಿಕೊಂಡು ಕುಳ್ಳಿರಿಸಿ ನಮಸ್ಕರಿಸಿದ. ಮಾನವ ಕುಲಶ್ರೇಷ್ಠರಿಬ್ಬರ ಮಿಲನ ವಿಜ್ಞಾನದ ಏಕತೆಯ ಸಂಕೇತವಾಗಿತ್ತು.

ಜೋಸೆಫ್ ಲಿಸ್ಟರ್‌ನ ಅವಿಶ್ರಾಂತ ಶ್ರಮದಿಂದ ಶಸ್ತ್ರಚಿಕಿತ್ಸಾಪದ್ಧತಿ ಮುಂದುವರಿಯಲು ಅಪಾರ ಸಹಾಯವಾಯಿತು. ಅಜ್ಞಾನಿಗಳು ಮತ್ತು ಅನಾಗರಿಕರ ಕೈಯಲ್ಲಿದ್ದ ಆ ವೃತ್ತಿಗೆ ಅಪಾರ ಮನ್ನಣೆ ದೊರಕಿತು. ಪ್ರಪಂಚದಾದ್ಯಂತ ಪ್ರತಿದಿನ ಜರುಗುವ ಶಸ್ತ್ರಚಿಕಿತ್ಸೆಯೂ ಅವನ ನೆನಪಿನ ಸ್ಮಾರಕವೆಂದರೆ ತಪ್ಪಾಗಲಾರದು. ಲಿಸ್ಟರ್ ೧೯೧೨ರಲ್ಲಿ ತೀರಿಕೊಂಡ. ಪಾರ್ಥಿವ ಶರೀರವನ್ನು ರಾಜಮನೆತನದವರಿಗೆ ಮೀಸಲಾದ ವೆಸ್ಟ್‌ಮಿನಿಸ್ಟರ್ ಅಬ್ಬೆಯಲ್ಲಿ ಸಕಲ ರಾಜಮರ್ಯಾದೆಗಳೊಡನೆ ಸಮಾಧಿ ಮಾಡಲಾಯಿತು. ಲಿಸ್ಟರ್‌ನ ಸಮಾಧಿಯ ಬಳಿ ಇರುವ ಫಲಕ ಜಗತ್ತಿನ ಶಸ್ತ್ರವೈದ್ಯರಿಗೆಲ್ಲಾ ಒಂದು ಪವಾಡವನ್ನು ಸ್ಮರಿಸುವ ಸ್ಮಾರಕವಾಗಿದೆ. ಅವನನ್ನು ಇಂದಿಗೂ ಒಬ್ಬ ಮಹಾ ಶಸ್ತ್ರವೈದ್ಯ (*Greatest Surgeon*) ಎಂದು ಪರಿಗಣಿಸಲಾಗಿದೆ.

# ೪. ರೋಗ ನಿರೋಧಕ ಚಿಕಿತ್ಸೆ

ವೈಜ್ಞಾನಿಕ ಸಂಶೋಧನೆಗಳಿಂದಾಗುವ ಪ್ರಯೋಜನಗಳ ಮುನ್ಸೂಚನೆ ಮೊದಲೇ ತಿಳಿದುಬಂದ ಕೆಲವು ನಿದರ್ಶನಗಳಿವೆ. ಸಾಂಕ್ರಾಮಿಕ ರೋಗಗಳು ಒಬ್ಬರಿಂದೊಬ್ಬರಿಗೆ ಹರಡಲು ಸೂಕ್ಷ್ಮಾಣುಗಳೇ ಕಾರಣವೆಂದು ಫ್ರಾನ್ಸ್‌ನ ಲೂಯಿ ಪ್ಯಾಶ್ಚರ್ ಖಚಿತಪಡಿಸುವುದಕ್ಕೆ ಕೆಲವು ದಶಕಗಳ ಮೊದಲೇ ಹಂಗೇರಿಯಾದ ಸೆಮ್ಮೆಲ್ವೀಸ್, ಬಾಣಂತಿ ಜ್ವರದ ಸೋಂಕು ಒಬ್ಬರಿಂದೊಬ್ಬರಿಗೆ ಹರಡುತ್ತದೆಂದು ಶಂಕಿಸಿ ಅದನ್ನು ತಡೆಗಟ್ಟುವ ವಿಧಾನಗಳನ್ನು ಸೂಚಿಸಿದ್ದ. ಗಾಯಗಳಲ್ಲಿ ನಂಜೇರಿ ಕೀವಾಗುವುದಕ್ಕೂ ಸೂಕ್ಷ್ಮಾಣುಗಳೇ ಕಾರಣವಿರಬೇಕೆಂದು ಅನುಮಾನಿಸಿ ಇಂಗ್ಲೆಂಡ್‌ನ ಜೋಸೆಫ್ ಲಿಸ್ಟರ್ ಅದನ್ನು ನಿವಾರಿಸಲು ಆಂಟಿಸೆಪ್ಟಿಕ್ ನಿಯಮಗಳನ್ನು ಜಾರಿಗೆ ತಂದಿದ್ದ. ಗಾಯಗಳಲ್ಲಿ ಕೀವಾಗುವುದನ್ನು ತಡೆಗಟ್ಟಲು ತಾನು ಸೂಚಿಸಿದ ಶುಚಿತ್ವದ ನಿಯಮಗಳು ಸಹಕಾರಿಯಾಗಬಹುದೆಂಬುದರ ಅರಿವು ಸೆಮ್ಮೆಲ್ವೀಸ್‌ನಿಗಿರಲಿಲ್ಲ. ಇತರ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ತಾನು ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳು ಉಪಯೋಗಕ್ಕೆ ಬರುತ್ತವೆಂದು ಲಿಸ್ಟರ್‌ಗೆ ಆಗ ಹೊಳೆದಿರಲಾರದು.

ಪ್ರಕೃತಿ ಮತ್ತು ಜೀವಂತ ಪ್ರಾಣಿಗಳಲ್ಲಿ ಕಣ್ಣಿಗೆ ಗೋಚರಿಸದ ಅಸಂಖ್ಯಾತ ಸೂಕ್ಷ್ಮ ಜೀವಾಣುಗಳು ಇವೆಯೆಂದು ಹಾಲೆಂಡಿನ ದಿನಸಿ ವ್ಯಾಪಾರಿ ಆಂಟನ್ ಲ್ಯೂವೆನ್ ಹೋಕ್ (*Anton Leeuwen Hoek*–೧೬೩೨–೧೭೨೩) ಸೂಕ್ಷ್ಮದರ್ಶಕ [*Microscope*] ಯಂತ್ರ ಸಹಾಯದಿಂದ ಪ್ರದರ್ಶಿಸಿದ್ದರೂ ರೋಗರುಜಿನಗಳಿಗೆ ಅವು ಕಾರಣವಾಗಬಹುದೆಂಬುದನ್ನು ಗ್ರಹಿಸಿರಲಿಲ್ಲ. ಈ ಅರಿವು ಉಂಟಾಗಲು ಮೂರು ಶತಮಾನಗಳೇ ಕಳೆಯಬೇಕಾಯಿತು. ಅವುಗಳ ದುಷ್ಕೃತ್ಯಗಳನ್ನು ಬಹಿರಂಗಗೊಳಿಸುವುದರಲ್ಲಿ ಪ್ಯಾಶ್ಚರ್ ಯಶಸ್ವಿಯಾದರೂ. ಜರ್ಮನಿಯ ರಾಬರ್ಟ್

ಕಾಕ್ ಅವುಗಳನ್ನು ಪ್ರತ್ಯಕ್ಷ ಸೆರೆ ಹಿಡಿದು ಕವಾಯಿತು ಮಾಡಿಸಿದ. ಇಂಗ್ಲೆಂಡ್‌ನ ಎಡ್ವರ್ಡ್ ಜೆನ್ನರ್ [೧೭೪೯-೧೮೨೩], ಮೈಲಿ ಬೇನೆಯ ನಿಯಂತ್ರಣಕ್ಕೆ, ರೋಗ ನಿರೋಧಕ ಲಸಿಕೆ [*Vaccination*]ಯನ್ನು ಜಾರಿಗೆ ತಂದಿದ್ದರೂ, ಆ ಪದ್ಧತಿಯ ವ್ಯಾಪಕ ಬಳಕೆ ಇತರ ರೋಗಗಳ ಹತೋಟಿಗೆ ನೆರವಾಗಲು ಇನ್ನೊಂದು ಶತಮಾನವೇ ಹಿಡಿಯಿತು. ಲೂಯಿ ಪ್ಯಾಶ್ಚರ್‌ನ ಸಂಶೋಧನೆಗಳು ಹೊಸ ಬಗೆಯ ರೋಗ ನಿರೋಧ ಚಿಕಿತ್ಸಾ ಪದ್ಧತಿ (*Immunoprophylaxis*)ಗೆ ನಾಂದಿಯಾಯಿತು. ಸ್ವತಃ ಪ್ಯಾಶ್ಚರ್‌ನೇ ರೇಬೀಸ್, ಆಂಥ್ರಾಕ್ಸ್‌ನಂತಹ ಮಾರಕ ರೋಗಗಳ ವಿರುದ್ಧ ಲಸಿಕೆಗಳನ್ನು ತಯಾರಿಸಿದ್ದಲ್ಲದೆ, ಅವನು ನಿರೂಪಿಸಿದ ತತ್ವಗಳ ಆಧಾರದ ಮೇಲೆ ಮುಂದೆ ಗಂಟಲುಮಾರಿ (*Diptheria*), ವಿಷಮ ಶೀತಜ್ವರ [*Typhoid Fever*], ಕ್ಷಯ [*Tuberculosis*] ದಂತಹ ಮಾರಕ ರೋಗಗಳ ನಿವಾರಣೆಗೂ ಲಸಿಕೆಗಳು ತಯಾರಾದವು. ಪ್ಯಾಶ್ಚರ್ ಸ್ವತಃ ವೈದ್ಯನಲ್ಲದಿದ್ದರೂ ವೈದ್ಯಕೀಯ ಸಮಸ್ಯೆಗಳ ಬಗೆಗೆ ಬೇರಾವ ವೈದ್ಯರೂ ಮಾಡದಷ್ಟು ಸಂಶೋಧನೆಗಳನ್ನು ನಡೆಸಿ, ಅಂಧಕಾರದಲ್ಲಿದ್ದ ವೈದ್ಯಕೀಯ ಕ್ಷೇತ್ರಕ್ಕೆ ದಾರಿದೀಪವಾದನು.

**ಬಾಲ್ಯ ಮತ್ತು ವಿದ್ಯಾಭ್ಯಾಸ :**

ಫ್ರಾನ್ಸ್ ದೇಶದ ಡೋಲ್ ಎಂಬ ಹಳ್ಳಿಯೊಂದರಲ್ಲಿ ಲೂಯಿ ಪ್ಯಾಶ್ಚರ್ ೧೮೨೨ರ ಡಿಸಂಬರ್ ೨೭ರಂದು ಜನ್ಮವೆತ್ತಿದ. ತಂದೆ ಕಡು ಬಡತನದ ದಲಿತ ಚಮ್ಮಾರರವನು. ಹತ್ತಿರದ ಅರ್ಬಾಯ್ ನಗರದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ, ಅತಿ ಬುದ್ಧಿವಂತನೆನಿಸಿಕೊಳ್ಳದಿದ್ದರೂ ವಿಚಾರ ಪ್ರಚೋದಕ ಪ್ರಶ್ನೆಗಳಿಂದ ಉಪಾಧ್ಯಾಯರನ್ನು ಆಗಾಗ್ಗೆ ಪೇಚಿಗೆ ಸಿಕ್ಕಿ ಹಾಕುವುದರಲ್ಲಿ ನಿಸ್ಸೀಮ. ಕಷ್ಟಪಟ್ಟು ಓದಿದರೆ ಒಳ್ಳೆಯ ಭವಿಷ್ಯ ಅವನಿಗಿದೆಯೆಂಬುದು ಅವನನ್ನು ಬಲ್ಲ ಹಲವರ ಖಚಿತಾಭಿಪ್ರಾಯವಾಗಿತ್ತು.

ಉನ್ನತ ವ್ಯಾಸಂಗ ಪ್ಯಾರಿಸ್‌ನಲ್ಲಿ ಮಾಡಬೇಕೆಂಬ ಹಂಬಲ ಲೂಯಿಸ್‌ಗೆ. ತಂದೆಯ ಬಡತನ ಅದಕ್ಕಡ್ಡಿಯಾದರೂ ಕೆಲವು ಬಂಧುಗಳ ಸಹಾಯದಿಂದ ಪ್ಯಾರಿಸ್‌ನ್ನೇನೋ ತಲುಪಿದ. ಅಲ್ಲಿ ಕೆಲವು ದಿನಗಳಲ್ಲೇ

ತೀವ್ರ ಅಸ್ವಸ್ಥನಾಗಿ ಹಿಂದಿರುಗಬೇಕಾಯಿತು. ಮುಂದೆ ಪ್ಯಾರಿಸ್‌ಗೆ ಹೋಗಲಾಗಲಿಲ್ಲ. ಅರ್ಬಾಯ್‌ನಲ್ಲೇ ವಿದ್ಯಾಭ್ಯಾಸ ಮುಂದುವರಿಯಿತು. ರಸಾಯನಶಾಸ್ತ್ರದ ಅಧ್ಯಾಪಕ ಡೂಮಾಸ್‌ನ ವಿಚಾರಪೂರಿತ ಭಾಷಣಗಳು ಆ ವಿಷಯದಲ್ಲಿ ಸುಪ್ತವಾಗಿದ್ದ ಅವನ ಅಭಿರುಚಿಯನ್ನು ಕೆರಳಿಸಿತು. ಶ್ರದ್ಧೆಯಿಂದ ಅಭ್ಯಸಿಸಿ ಪದವೀಧರನಾದನಲ್ಲದೆ, ಮುಂದೆ ರಸಾಯನ ಶಾಸ್ತ್ರದಲ್ಲಿ ಡಾಕ್ಟರೇಟನ್ನು ಪಡೆದ. ಕೆಲಕಾಲ ಅಲ್ಲಿನ ಪ್ರಯೋಗಶಾಲೆಯಲ್ಲೇ ಕಾರ್ಯನಿರತನಾಗಿದ್ದ.

**ಸಂಶೋಧನೆಗಳ ಸರಣಿ :**

ರಸಾಯನ ಶಾಸ್ತ್ರದಲ್ಲಿ ಹೆಚ್ಚಿನ ಸಂಶೋದನೆ ನಡೆಸಬೇಕೆಂಬ ಅಭಿಲಾಷೆಯಿಂದ ಪ್ಯಾಶ್ಚರ್ ಪ್ಯಾರಿಸ್‌ನ ಹೆಸರಾಂತ ರಸಾಯನ ಶಾಸ್ತ್ರ ಪರಿಣತ ಲಾರೆಂಟ್‌ನ ಪ್ರಯೋಗಾಲಯದಲ್ಲಿ ಸಹಾಯಕನಾಗಿ ಸೇರಿದ. ಮೊದಲು ಟಾರ್‌ಟಾರಿಕ್ ಆಮ್ಲದ ಬಗೆಗೆ ಹೆಚ್ಚಿನ ವಿವರಗಳನ್ನು ತಿಳಿಯಲು ಪ್ರಯೋಗಗಳನ್ನು ನಡೆಸಿದ. ಆದರೆ ಆಗ ಫ್ರಾನ್ಸಿನಲ್ಲಿ ಕ್ರಾಂತಿಯಾಗುತ್ತಿದ್ದು ಕೆಲಕಾಲ ಸೇನೆಯನ್ನು ಸೇರುವುದು ಅನಿವಾರ್ಯವಾಯಿತು. ಯುದ್ಧ ಮುಗಿದ ನಂತರ ಮುಂದುವರಿಸಿದ ಸಂಶೋಧನೆಯಿಂದ ಟಾರ್ಟಾರಿಕ್ ಆಮ್ಲದ ಹರಳಿನ ಮೂಲಕ ಬೆಳಕಿನ ಕಿರಣಗಳನ್ನು ಹಾಯಿಸಿದಾಗ, ಅವುಗಳ ಮಾರ್ಗ ಬದಲಾಯಿಸುತ್ತದೆಂಬುದನ್ನು ಪ್ರದರ್ಶಿಸಿ ವೈಜ್ಞಾನಿಕ ಕ್ಷೇತ್ರದಲ್ಲಿ ಅಚ್ಚರಿಯನ್ನುಂಟು ಮಾಡಿದ. ಪ್ರತಿಭಾವಂತ ಸಂಶೋಧಕನೆಂದು ತನ್ನ ೨೬ನೇ ವಯಸ್ಸಿನಲ್ಲಿ ಖ್ಯಾತನಾದ ಪ್ಯಾಶ್ಚರ್ ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾನಿಲಯದ ರಸಾಯನಶಾಸ್ತ್ರವಿಭಾಗದ ಪ್ರಾಧ್ಯಾಪಕನಾಗಿ ನೇಮಕವಾದನು,

ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾನಿಲಯದ ಹೊಸ ಕೆಲಸ ಪ್ಯಾಶ್ಚರ್‌ನಿಗೆ ಸಂಶೋಧನೆಗಳಲ್ಲಿ ಹೆಚ್ಚು ಅವಕಾಶ ದೊರಕಿಸಿತು. ಹೆಚ್ಚಿನ ಹುರುಪು ಮತ್ತು ದಕ್ಷತೆಯಿಂದ ಎಡೆಬಿಡವೆ ಕಾರ್ಯನಿರತನಾಗಿರುತ್ತಿದ್ದ. ಪ್ಯಾಶ್ಚರ್ ಅಲ್ಲಿನ ವರಿಷ್ಠರೆಲ್ಲರ ಗಮನ ಸೆಳೆದನು. ವಿಶ್ವವಿದ್ಯಾನಿಲಯದ ಮುಖ್ಯಸ್ಥರ ಮಗಳು ಮೇರಿ ಅವನ ಚಟುವಟಿಕೆಗಳಿಗೆ ಮಾರುಹೋಗಿ ಅವನಲ್ಲಿ

ಅನುರಕ್ತಳಾದದ್ದರಲ್ಲಿ ಆಶ್ಚರ್ಯವೇನಲ್ಲ! ಬಡ ಚಮ್ಮಾರನ ಮಗ ನೊಡನೆ ಸಂಬಂಧ ಬೆಳಸಲು ಅವಳ ತಂದೆಗೆ ಮೊದಲು ಅರೆ ಮನಸ್ಸಿದ್ದರೂ, ಪ್ಯಾಶ್ಚರ್‌ನ ವೈಜ್ಞಾನಿಕ ಪ್ರತಿಭೆಗೆ ಮಾರುಹೋಗಿದ್ದ ಅವನು ಕೊನೆಗೆ ತನ್ನ ಸಮ್ಮತಿಯನ್ನು ನೀಡಿದ. ಸದಾ ಪ್ರಯೋಗಾಲಯದಲ್ಲಿ ಕಾರ್ಯನಿರತ ನಾಗಿರುತ್ತಿದ್ದ ಪ್ಯಾಶ್ಚರ್ ಮುಹೂರ್ತದ ಸಮಯದಲ್ಲಿ ಚರ್ಚ್‌ನಲ್ಲಿ ನಾಪತ್ತೆ! ಸ್ನೇಹಿತರು ಕರೆತರಲು ಪ್ರಯೋಗಾಲಯಕ್ಕೆ ತೆರಳಿದರೂ, ಮದು ಮಗ ಆಗಮಿಸಿದ್ದು ತನ್ನ ಪ್ರಯೋಗದ ನಂತರವೇ! ಸುದೈವವೆಂದರೆ ಅವನ ವಧು ಮೇರಿ ಬಾಳಪಯಣದಲ್ಲಿ ಅವನ ಸಂಶೋಧನಾ ಚಟುವಟಿಕೆಗಳಿಗೆ ಸಂಪೂರ್ಣ ಸಹಕಾರವಿತ್ತ ಸದ್ಗೃಹಿಣಿಯಾಗಿದ್ದಳಲ್ಲದೇ, ಸಂಶೋಧನೆ ಗಳಿಗೂ ನೆರವಾದುದು.

**ಮದ್ಯಸಾರದ ಸಮಸ್ಯೆ :**

ಮದ್ಯಸಾರದ (*Alcohol*) ತಯಾರಿಕೆ ಫ್ರಾನ್ಸ್‌ನ ಅತಿ ಮುಖ್ಯ ವಾದ ಕಸುಬು. ಅದಕ್ಕಾಗಿ ಬಳಸುತ್ತಿದ್ದ ದ್ರಾಕ್ಷಾರಸ ಸರಿಯಾಗಿ ಹುದು ಗೇಳದೆ (*Fermentation*) ಕೊಳೆತು ಕೆಟ್ಟುಹೋಗುವುದು ಒಂದು ಸಮಸ್ಯೆಯಾಗಿತ್ತು. ಫ್ರಾನ್ಸಿನ ಆರ್ಥಿಕ ವ್ಯವಸ್ಥೆ ಇದರಿಂದ ಬುಡಮೇಲಾ ಗುವ ಸ್ಥಿತಿಗೆ ತಲುಪಿತು. ಪ್ಯಾಶ್ಚರ್‌ನ ಗಮನ ಆ ಕಡೆ ಹರಿಯಿತು.

ಸಮಸ್ಯೆಯ ಗುಟ್ಟನ್ನರಿಯಲು ದ್ರಾಕ್ಷಿಹಣ್ಣುಗಳಿಂದ ಮದ್ಯಸಾರ ವನ್ನು ತಯಾರಿಸುವ ವಿಧಾನದ ಅರಿವು ಮುಖ್ಯ. ಪ್ಯಾಶ್ಚರ್ ಅವುಗಳನ್ನು ಪರೀಕ್ಷಿಸಿದಾಗ ಒಳ್ಳೆಯ ದ್ರಾಕ್ಷಿ ಹಣ್ಣುಗಳಿಂದ ತಯಾರಿಸಿದ ಮಿಶ್ರಣದಲ್ಲಿ ಸರಿಯಾಗಿ ಹುದುಗೆದ್ದು ಒಳ್ಳೆಯ ಮದ್ಯಸಾರ ಇಳುವರಿಯಾಗುವುದನ್ನೂ, ರೋಗ ಪೀಡಿತ ಹಣ್ಣುಗಳನ್ನು ಉಪಯೋಗಿಸಿದಾಗ ಮಿಶ್ರಣ ಕೊಳೆತು ನಾರುವುದನ್ನೂ ಗುರ್ತಿಸಿದ.

ಮುಂದೆ ಪ್ಯಾಶ್ಚರ್ ಹುದುಗೇಳುವ ರೀತಿಯ ಪರಿಶೀಲನೆ ನಡೆಸಿದ. ನಿಯಂತ್ರಿತ ಪ್ರಯೋಗಗಳಿಂದ ದ್ರಾಕ್ಷಾರಸದಲ್ಲಿ ಹುದುಗೇಳಲು ಅದಕ್ಕೆ ಬಾಹ್ಯವಾತಾವರಣ ಅವಶ್ಯವೆನ್ನುವುದನ್ನು ಮೊದಲು ಶೃತಪಡಿಸಿದ. ಹುದು ಗೇಳಿಸಬೇಕಾದ ದ್ರಾಕ್ಷಾರಸದ ಮಾದರಿಗಳನ್ನು ಎರಡು ಗಾಜಿನ ಜಾಡಿಗಳಲ್ಲಿ

ರಿಸಿ, ಅದರಲ್ಲಿ ಒಂದನ್ನು ಸರಿಯಾಗಿ ಕಾಯಿಸಿ ಅದರ ದ್ವಾರವನ್ನು ಬಿರಡೆಯಿಂದ ಮುಚ್ಚಿದ. ಇನ್ನೊಂದನ್ನು ಕಾಯಿಸದೆ ಬಾಯಿ ತೆರೆದೇ ಇರಿಸಿದ. ಒಂದೆರಡು ದಿನ ಕಳೆದ ನಂತರ ಅವನ್ನು ಪರೀಕ್ಷಿಸಿದಾಗ ಮೊದಲನೇ ಜಾಡಿಯಲ್ಲಿ ಹುದುಗೆದ್ದಿರಲಿಲ್ಲ. ಮದ್ಯಸಾರವೂ ಉತ್ಪತ್ತಿಯಾಗಿರಲಿಲ್ಲ. ಎರಡನೆಯದರಲ್ಲಿ ಹುದುಗೆದ್ದು ಮದ್ಯಸಾರ ತಯಾರಾಗಿತ್ತು.

ಈ ಪ್ರಯೋಗದಿಂದ ಹುದುಗೇಳುವುದಕ್ಕೆ ದ್ರಾಕ್ಷಾರಸದ ಮಿಶ್ರಣಕ್ಕೆ ಬಾಹ್ಯವಾತಾವರಣ ಮತ್ತು ಅದರಲ್ಲಿರಬಹುದಾದ "ಕಿಣ್ವ" ಅಥವಾ "ಯೀಸ್ಟ್" (*Yeast*) ಸೂಕ್ಷ್ಮಕಣಗಳು ಅತ್ಯವಶ್ಯಕವೆನ್ನುವುದನ್ನು ಪ್ಯಾಶ್ಚರ್ ಪ್ರಚುರಪಡಿಸಿದ. ಇದೇ ರೀತಿಯಲ್ಲಿ ದ್ರಾಕ್ಷಾರಸ ಕೊಳೆತು ಮದ್ಯಸಾರ ಕೆಡುವುದಕ್ಕೆ ರೋಗ ಪೀಡಿತ ದ್ರಾಕ್ಷಿಗಳಲ್ಲಿರಬಹುದಾದ ಬ್ಯಾಕ್ಟೀರಿಯಾಗಳೆಂಬ ಸೂಕ್ಷ್ಮಾಣುಗಳು ಕಾರಣವೆಂಬುದನ್ನು ಮುಂದುವರಿದ ಪ್ರಯೋಗಗಳಿಂದ ಸಾಧಿಸಿ ತೋರಿಸಿದ.

ಯೀಸ್ಟ್ ಅಥವಾ ಬ್ಯಾಕ್ಟೀರಿಯಾಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸಲಾಗದಿದ್ದ ಆ ಕಾಲದಲ್ಲಿ, ಈ ಜೀವಿಗಳ ಸ್ವಯಂ ಉತ್ಪತ್ತಿಯ(*Spontaneous Generation*) ಬಗೆಗೆ ವಿಜ್ಞಾನಿಗಳು ಮತ್ತು ಧರ್ಮಗುರುಗಳ ನಡುವೆ ತೀವ್ರ ಜಿಜ್ಞಾಸೆ ಇತ್ತು. ಹುಳು ಹುಪ್ಪಟೆ, ನೊಣ ಮತ್ತು ಇತರ ಸೂಕ್ಷ್ಮ ಕ್ರಿಮಿಗಳು ಕೊಳೆಯುತ್ತಿರುವ ತಿಪ್ಪೆಗುಂಡಿಗಳಲ್ಲಿ ಸ್ವಯಂ ಉತ್ಪತ್ತಿಯಾಗುತ್ತದೆಂಬುದು ಆಧ್ಯಾತ್ಮಿಕವಾದವಾಗಿದ್ದು, ಹೆಚ್ಚು ಜನ ಅವರನ್ನು ಬೆಂಬಲಿಸುತ್ತಿದ್ದರು. ಪ್ಯಾಶ್ಚರ್‌ನ ತತ್ವಗಳಿಗೆ ಮೊದಲು ವಿರೋಧ ವ್ಯಕ್ತಪಟ್ಟರೂ ನಿಯಂತ್ರಿತ ಪ್ರಯೋಗಗಳ ಫಲಿತಾಂಶಗಳು ಅವನ ವಿರೋಧಿಗಳ ಕಣ್ತೆರೆಯುವಂತೆ ಮಾಡಿದವು.

ರೋಗ ಪೀಡಿತ ಹಣ್ಣುಗಳಿಂದ ತಯಾರಿಸಿದ ದ್ರಾಕ್ಷಾರಸದಲ್ಲಿನ ಬ್ಯಾಕ್ಟೀರಿಯಗಳನ್ನು ನಾಶ ಮಾಡುವ ಶಾಖದ ಮಟ್ಟವನ್ನು ಗುರುತಿಸಿದ ಕೀರ್ತಿ ಪ್ಯಾಶ್ಚರ್‌ನದೇ. ಆ ರೀತಿ ಗುರುತಿಸಿದ ಮಟ್ಟದ ಶಾಖದಲ್ಲಿ ಬ್ಯಾಕ್ಟೀರಿಯಗಳು ನಾಶವಾದ ಮೇಲೆ, ಆ ಮಿಶ್ರಣವನ್ನು ಎಂದಿನಂತೆ ಹುದುಗೇಳಿಸಿ, ಮದ್ಯಸಾರವನ್ನು ಪಡೆಯಬಹುದು. ಬ್ಯಾಕ್ಟೀರಿಯಾ ನಾಶವಾಗಿ ಮೂಲವಸ್ತುವಿನ ಗುಣ ವಿಶೇಷ ಮೊದಲಿನಂತೆ ಉಳಿಯುವಂತೆ

ಬಿಸಿ ಮಾಡುವ ವಿಧಾನವೇ ಈಗ ಮನೆಮಾತಾಗಿರುವ "ಪ್ಯಾಶ್ಚರೈಜೇಷನ್" (*Pastuerisation*) ಪದ್ಧತಿ. ಕುಡಿಯುವ ನೀರು, ಹಾಲು ಮುಂತಾದುವುಗಳಿಂದ ಸಾಂಕ್ರಾಮಿಕವಾಗಿ ಹರಡುತ್ತಿದ್ದ ಕ್ಷಯ, ವಿಷಮಶೀತ ಜ್ವರ, ಗಂಟಲು ಮಾರಿಗಳಂತಹ ಮಾರಕ ರೋಗಗಳನ್ನು ಈ ವಿಧಾನದ ಬಳಕೆಯಿಂದ ಈಗ ಯಶಸ್ವಿಯಾಗಿ ತಡೆಗಟ್ಟಲು ಸಾಧ್ಯವಾಗಿದೆ.

ದ್ರಾಕ್ಷಾರಸದಲ್ಲಿ ಹುದುಗೇಳುವುದು ಮತ್ತು ಅದು ಕೊಳೆಯುವುದಕ್ಕೆ ಬಾಹ್ಯವಾತಾವರಣದಿಂದ ಸೂಕ್ಷ್ಮಾಣುಗಳು ಬೆರಕೆಯಾಗುತ್ತವೆಂಬ ಪ್ಯಾಶ್ಚರ್‌ನ ಸಿದ್ಧಾಂತ ಇಂಗ್ಲೆಂಡ್‌ನ ಶಸ್ತ್ರವೈದ್ಯ ಜೋಸೆಫ್ ಲಿಸ್ಟರ್ ತನ್ನ ರೋಗಿಗಳ ತೆರದ ಗಾಯಗಳಲ್ಲಿ ಕೀವಾಗುವುದಕ್ಕೆ ಕಾರಣವನ್ನು ಶೋಧಿಸುವುದರಲ್ಲಿ ಮಾರ್ಗದರ್ಶನ ನೀಡಿತಲ್ಲದೆ "ಆಂಟಿಸೆಪ್ಟಿಕ್" ನಿಯಮಗಳನ್ನು ರೂಪಿಸುವಲ್ಲಿ ಸಹಕಾರಿಯಾಯಿತು. ಲಿಸ್ಟರ್ ಇದರಿಂದ ತನಗಾದ ಉಪಕಾರಕ್ಕೆ ಪ್ಯಾಶ್ಚರ್‌ಗೆ ಪತ್ರ ಬರೆದು ಕೃತಜ್ಞತೆ ಸಲ್ಲಿಸಿದ್ದ.

**ರೇಷ್ಮೆ ಹುಳುಗಳ ರೋಗ:**

ಫ್ರಾನ್ಸಿನ ಪ್ರಮುಖ ಕೈಗಾರಿಕೆಗಳಲ್ಲಿ ರೇಷ್ಮೆ ಉತ್ಪಾದನೆಯೂ ಒಂದು. ೧೮೬೫ರಲ್ಲಿ ರೇಷ್ಮೆ ಹುಳುಗಳು ಒಂದು ವಿಚಿತ್ರ ರೋಗದಿಂದ ನರಳಿ ಸಾಯುತ್ತಿದ್ದು, ರೇಷ್ಮೆ ಕೈಗಾರಿಕೆ ನಶಿಸುವ ಸ್ಥಿತಿಗೆ ಬಂದಿತ್ತು. ಪ್ಯಾಶ್ಚರ್‌ನ ಸಂಶೋಧನಾ ಕೌಶಲ್ಯದ ಅರಿವಿದ್ದ ಫ್ರಾನ್ಸ್ ಸರ್ಕಾರ ಈ ರೋಗಕ್ಕೆ ಪರಿಹಾರ ಕಂಡು ಹಿಡಿಯುವಂತೆ ಕೇಳಿಕೊಂಡಿತು. ಪ್ಯಾಶ್ಚರ್ ಅತ್ಯಂತ ಶ್ರದ್ಧೆ ಮತ್ತು ಆತ್ಮ ವಿಶ್ವಾಸದಿಂದ ರೋಗದ ಮೂಲ ಕಾರಣಗಳ ಶೋಧನೆಯಲ್ಲಿ ತೊಡಗಿದನಾದರೂ ಫಲಿತಾಂಶ ನಿರೀಕ್ಷಿಸಿದಷ್ಟು ಸುಲಭದಲ್ಲಿ ದೊರೆಯುವಂತಿರಲಿಲ್ಲ. ಜೀವಜಂತುಗಳ ರೋಗ ಸಂಶೋಧನೆ ನಿಧಾನವಾಗುವುದೂ ಸ್ವಾಭಾವಿಕವೇ. ಜೊತೆಗೆ ಪ್ಯಾಶ್ಚರ್ ಸಹ ಕೆಲವು ವೈಯಕ್ತಿಕ ಕಷ್ಟಗಳಲ್ಲಿ ಸಿಲುಕಬೇಕಾಯಿತು. ಈ ಸಮಯದಲ್ಲೇ ಅವನ ಎರಡು ಹೆಣ್ಣು ಮಕ್ಕಳೂ ವಿಷಮಶೀತ ಜ್ವರದಿಂದ ಅಕಾಲ ಮೃತ್ಯುವಿಗೀಡಾದರು. ಮತ್ತೆ ಸ್ವಲ್ಪ ಸಮಯದಲ್ಲೇ ಅವನಿಗೇ ಮೆದುಳಿನಲ್ಲಿ ರಕ್ತಸ್ರಾವವಾಗಿ ಪಾರ್ಶ್ವವಾಯು ಬಡಿಯಿತು. ಮುಂದೆ ಜೀವನಾಂತ್ಯದವರೆಗೂ ಎಡಗೈ

ಮತ್ತು ಎಡಗಾಲುಗಳು ಊನವಾಗಿ ಅಂಗವಿಕಲನಾಗಿ ಕಳೆಯುವಂತಾಯಿತು. ಅವನು ಸಂಶೋಧನಾ ಕ್ಷೇತ್ರದಲ್ಲಿ ಪಡೆಯುತ್ತಿದ್ದ ಕೀರ್ತಿಯನ್ನು ಸಹಿಸದ ವಿರೋಧಿಗಳು ರೇಷ್ಮೆ ಹುಳುಗಳ ರೋಗ ನಿವಾರಣೆಗೆ ಕ್ರಮಗಳನ್ನು ಕಂಡು ಹಿಡಿಯುವುದರಲ್ಲಿ ಆಗುತ್ತಿದ್ದ ವಿಳಂಬವನ್ನು ಉಪಯೋಗಿಸಿಕೊಂಡು ಅಪ ಪ್ರಚಾರಕ್ಕೆ ಮುಂದಾದರು. ವೈಯಕ್ತಿಕ ದುರಂತಗಳಾಗಲೀ, ಇತರರ ಟೀಕೆ ಗಳಾಗಲೀ ಪ್ಯಾಶ್ಚರ್‌ನನ್ನು ಎದೆಗುಂದಿಸಲಿಲ್ಲ. ರೇಷ್ಮೆ ಹುಳುಗಳ ರೋಗಕ್ಕೆ ಸೂಕ್ಷ್ಮ ಜೀವಾಣುಗಳೇ ಕಾರಣವೆಂಬುದನ್ನು ತನ್ನ ಪ್ರಯೋಗಗಳಿಂದ ಬಹಿರಂಗಗೊಳಿಸಿದನಲ್ಲದೆ, ರೋಗದ ನಿವಾರಣೆಗೂ ಕ್ರಮಗಳನ್ನು ರೂಪಿ ಸಿದ. ರೇಷ್ಮೆ ಉದ್ಯೋಗ ಸ್ವಲ್ಪ ಸಮಯದಲ್ಲೇ ಚೇತರಿಸಿಕೊಂಡು, ಅವನ ವಿರೋಧಿಗಳ ಸದ್ದಡಗುವಂತಾಯಿತು. ಪ್ಯಾಶ್ಚರ್‌ನ ಸಂಶೋಧನಾ ಫಲಿ ತಾಂಶಗಳಿಗೆ ಮಾರುಹೋದ ಫ್ರೆಂಚ್ ಸರ್ಕಾರ ಅವನು ಮಾನವ ಕಲ್ಯಾಣ ಕ್ಕಾಗಿ ಸಂಶೋಧನೆಗಳನ್ನು ಮುಂದುವರಿಸಲು ಸುಸಜ್ಜಿತವಾದ ಪ್ರಯೋಗಾ ಲಯವನ್ನು ನಿರ್ಮಾಣ ಮಾಡಿತಲ್ಲದೆ, ಐದುನೂರು ಡಾಲರುಗಳ ವಾರ್ಷಿಕ ಸಂಭಾವನೆಯನ್ನೂ ಮಂಜೂರು ಮಾಡಿತು.

ಪ್ಯಾಶ್ಚರ್ ವಿಜ್ಞಾನಿಯಾಗಿದ್ದಲ್ಲದೆ ಧೀರೋದಾತ್ತ ದೇಶಪ್ರೇಮಿ. ೧೮೭೧ರಲ್ಲಿ ಜರ್ಮನರು ಫ್ರಾನ್ಸಿನ ಮೇಲೆ ದಂಡೆತ್ತಿ ಬಂದಾಗ, ತನ್ನ ಒಬ್ಬನೇ ಮಗನನ್ನು ಸೇನೆಗೆ ಸೇರಿಸಿ ಜರ್ಮನ್‌ರ ವಿರುದ್ಧ ಹೋರಾಡಲು ಕಳುಹಿಸಿದನು. ಸುಮಾರು ೧೨೦೦ ಜನ ಇದ್ದ ತುಕಡಿಯೊಂದರಲ್ಲಿ ಉಳಿ ದವರು ಕೇವಲ ೩೦೦ ಮಂದಿ ಸೈನಿಕರು. ಅದರಲ್ಲಿ ಗಾಯಗೊಂಡಿ ದ್ದರೂ ಪ್ಯಾಶ್ಚರ್‌ನ ಮಗ ಬದುಕಿದ್ದು ಪ್ಯಾಶ್ಚರ್ ದಂಪತಿಗಳಿಗೆ ಪರಮಾ ನಂದದ ಸಂಗತಿ. ಯುದ್ಧದಲ್ಲಿ ಫ್ರಾನ್ಸ್ ಸೋಲನುಭವಿಸಿತು. ಯುದ್ಧ ದಲ್ಲಿ ಗೆದ್ದ ಜರ್ಮನ್ ಸರ್ಕಾರ ವೈಜ್ಞಾನಿಕ ಸಾಧನೆಗಳನ್ನು ಮೆಚ್ಚಿ ದಯ ಪಾಲಿಸಿದ ಗೌರವ ಪದವಿಗಳನ್ನು ಅಪ್ಪಟ ದೇಶಾಭಿಮಾನಿಯಾದ ಪ್ಯಾಶ್ಚರ್ ನಿರಾಕರಿಸಿದನು.

## ನೆರಡಿ ರೋಗ ಮತ್ತು ಕೋಳಿ ಕಾಲರಾ :

ಜರ್ಮನಿಯೊಡನೆ ಸಮರದಲ್ಲಿ ಸೋಲನುಭವಿಸಿದ್ದ ಫ್ರಾನ್ಸ್

ಯುದ್ಧಾನಂತರ ಮತ್ತೊಂದು ಆರ್ಥಿಕ ದುರಂತದತ್ತ ಸಾಗುವಂತಾಯಿತು. ಹೈನುಗಾರಿಕೆ ಮತ್ತು ಕುರಿಸಾಕಾಣಿಕೆ ಹಳ್ಳಿಗಾಡಿನ ಜನರ ಜೀವನಾಡಿ. ೧೮೭೦ರ ಸಮಯಕ್ಕೆ ಈ ಪ್ರಾಣಿಗಳು ಗಂಟಲಿಗೆ ಸಂಬಂಧಿಸಿದ ವಿಚಿತ್ರ ತರಹದ ರೋಗಕ್ಕೆ ಬಲಿಯಾಗಿ ತಂಡತಂಡವಾಗಿ ಸಾಯಲಾರಂಭಿಸಿದವು. ಅವುಗಳನ್ನೇ ನೆಚ್ಚಿಕೊಂಡಿದ್ದ ಹಳ್ಳಿಗಾಡಿನ ಜನರ ಆರ್ಥಿಕ ಪರಿಸ್ಥಿತಿ ಡೋಲಾಯಮಾನವಾಯಿತು.

ಅಂಥ್ರಾಕ್ಸ್ (*Anthrax*) ನೆರಡಿರೋಗ, ಮೆಟ್ರಿರೋಗ ಅನಾದಿ ಕಾಲದಿಂದಲೂ ಪಶು ಸಂಕುಲಕ್ಕೆ ಮಾರಕವಾದ ಕಾಯಿಲೆಯಾಗಿದ್ದರೂ ಅದರ ಹತೋಟಿ ಸಾಧ್ಯವಾಗಿರಲಿಲ್ಲ. ಜರ್ಮನಿಯ ರಾಬರ್ಟ್‌ಕಾಕ್ ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಈ ಕಾಯಿಲೆಗೆ ಅಂಥ್ರಾಕ್ಸ್ ಬ್ಯಾಸಿಲೈ(*Anthrax Bacilli*)ಗಳೆಂಬ ಸೂಕ್ಷ್ಮಜೀವಾಣುಗಳು ಕಾರಣ ವೆಂಬುದನ್ನು ಸ್ವಲ್ಪ ಸಮಯದ ಹಿಂದೆ ಕಂಡುಹಿಡಿದಿದ್ದ. ಆದರೆ ನೆರಡಿ ರೋಗದ ಹತೋಟಿಯ ದಿಸೆಯಲ್ಲಿ ಹೆಚ್ಚಿನ ಪ್ರಗತಿಯಾಗಿರಲಿಲ್ಲ. ಅದರ ಯಶಸ್ಸು ಲೂಯಿ ಪ್ಯಾಶ್ಚರನದಾಯಿತು.

ನೆರಡಿ ರೋಗದ ಹತೋಟಿಗೆ ಪ್ಯಾಶ್ಚರ್ ನಿರೂಪಿಸಿದ ತತ್ವ ಒಂದು ಆಕಸ್ಮಿಕ. ಸದಾ ಒಂದಲ್ಲ ಒಂದು ಸಮಸ್ಯೆಯ ಬಗೆಗೆ ಸಂಶೋಧನಾ ನಿರತ ನಾಗಿದ್ದ ಪ್ಯಾಶ್ಚರ್ ಆಗ ಕೋಳಿ ಕಾಲರವೆಂಬ ಕೋಳಿಗಳ ಮಾರಕ ರೋಗದ ಹತೋಟಿಗೆ ಸಂಶೋಧನೆ ನಡೆಸುತ್ತಿದ್ದ. ಅದಕ್ಕೂ ಒಂದು ವಿಧದ ಅಗೋಚರ ಸೂಕ್ಷ್ಮಜೀವಾಣುವೇ ಕಾರಣವೆಂದು ಅನುಮಾನಿಸಿ, ಅವುಗಳ ಗುಣ ಲಕ್ಷಣಗಳನ್ನು ಅಭ್ಯಾಸಿಸಲು ಹಲವಾರು ವಿಧದ ಆಹಾರ ಮಿಶ್ರಣ(*Broth*) ಗಳಲ್ಲಿ ಅವುಗಳನ್ನು ಬೆಳೆಸುತ್ತಿದ್ದನು. ಅವು ಒಂದೇ ಮಿಶ್ರಣದಲ್ಲಿ ಹೆಚ್ಚು ಕಾಲ ಜೀವಿಸುತ್ತಿರಲಿಲ್ಲವಾದ್ದರಿಂದ ಅವನ್ನು ಬೇರೆ ಬೇರೆ ಮಿಶ್ರಣಗಳಿಗೆ ಆಗಾಗ್ಗೆ ವರ್ಗಾಯಿಸಬೇಕಿತ್ತು. ಇಂತಹ ತಳಿಗಳಿರುವ ಮಿಶ್ರಣದ ಒಂದು ತೊಟ್ಟನ್ನು ಕೋಳಿಗಳಿಗೆ ಕುಡಿಸಿದರೂ ರೋಗ ಪ್ರಕಟವಾಗಿ ಅವು ಸಾಯುತ್ತಿದ್ದವು. ಬಹಳ ದಿನಗಳಿಂದ ಬದಿಗಿಟ್ಟಿದ್ದ ಮಿಶ್ರಣದ ತೊಟ್ಟುಗಳನ್ನೂ ಪ್ಯಾಶ್ಚರ್ ಮರೆವಿನಿಂದ ಆಕಸ್ಮಿಕವಾಗಿ ಕೆಲವು ಕೋಳಿಗಳಿಗೆ ಕುಡಿಸಿದ. ಆ ಕೋಳಿಗಳಲ್ಲಿ ರೋಗ ಪ್ರಕಟವಾದರೂ ಅದು ಬಹಳ ಸೌಮ್ಯರೀತಿಯದಾ

ಗಿದ್ದು ಅವು ಸಾಯಲಿಲ್ಲ. ಆಶ್ಚರ್ಯಚಕಿತನಾದ ಪ್ಯಾಶ್ಚರ್ ಅವುಗಳಿಗೆ ಹೊಸದಾಗಿ ಬೆಳಿಸಿದ ತಳಿಗಳಿರುವ ಮಿಶ್ರಣವನ್ನು ಕುಡಿಸಿದ. ಅವುಗಳಲ್ಲಿ ರೋಗ ಕಾಣಿಸಲೇ ಇಲ್ಲ ! ಅದೇ ಹೊಸ ತಳಿಯ ಮಿಶ್ರಣ ಕುಡಿದ (ಹಾಗೂ ಹಳೇ ಮಿಶ್ರಣ ಕುಡಿಯದಿದ್ದ) ಇತರ ಕೋಳಿಗಳು ರೋಗ ತಗುಲಿ ಸಾವನ್ನಪ್ಪಿದವು. ಹೊಸದೊಂದು ತತ್ವವೇ ಬೆಳಕಿಗೆ ಬಂದಂತಾಯಿತು. ಈ ರೀತಿಯ ಪ್ರಯೋಗಗಳನ್ನು ಮತ್ತೆ ಮತ್ತೆ ಮಾಡಿ ತನ್ನ ಫಲಿತಾಂಶಗಳನ್ನು ಪ್ಯಾಶ್ಚರ್ ಖಚಿತಪಡಿಸಿದನು.

ಈ ಆಕಸ್ಮಿಕದಿಂದ ಒಂದು ಹೊಸ ಸಿದ್ಧಾಂತ ಬೆಳಕಿಗೆ ಬಂದಿತು. ಹಳತಾದ ಮಿಶ್ರಣದಲ್ಲಿದ್ದ ರೋಗಾಣುಗಳಲ್ಲಿ ರೋಗಕಾರಕ ಶಕ್ತಿ ಕುಂದಿದ್ದು, ಅವುಗಳು ರೋಗವನ್ನು ತೀವ್ರಗತಿಯಲ್ಲುಂಟುಮಾಡಲು ಅಶಕ್ತವಾಗಿರುತ್ತದೆ. ಸೌಮ್ಯ ರೀತಿಯಲ್ಲಿ ಪ್ರಕಟವಾದ ಕಾಯಿಲೆಯಿಂದ ಆ ಪ್ರಾಣಿಗಳಿಗೆ ಮುಂದೆ ಹೊಸ ತಳಿಯ ರೋಗಾಣುಗಳು ಸೋಂಕಿದರೆ ಅದನ್ನು ತಡೆಗಟ್ಟುವ ಶಕ್ತಿ *(Immunity)* ವರ್ಧನೆಯಾಗಿರುತ್ತದೆ ಎಂಬುದು ಪ್ಯಾಶ್ಚರ್‌ನಿಂದ ಹೊರಬಂದ ಸಿದ್ಧಾಂತ.

ಪ್ಯಾಶ್ಚರ್ ನಿರೂಪಿಸಿದ ರೋಗ ನಿರೋಧ ಶಕ್ತಿಯ ಸಿದ್ಧಾಂತದ ಆಧಾರದ ಮೇಲೆ ಹಲವಾರು ಕಾಯಿಲೆಗಳನ್ನು ತಡೆಗಟ್ಟಲು ಆಯಾ ರೋಗದ ಶಕ್ತಿಗುಂದಿದ ರೋಗಾಣುಗಳಿಂದ ತಯಾರಿಸಿದ ಚುಚ್ಚುಮದ್ದುಗಳು ಆವನಿಂದಲೇ ತಯಾರಾದವು. ಅದೇ ಈಗ ಜನಪ್ರಿಯವಾಗಿರುವ ರೋಗನಿರೋಧಕ ಚುಚ್ಚುಮದ್ದಿನ (*Inoculation and Vaccination*) ಆಂದೋಲನದ ತಳಹದಿ.

ಕೋಳಿಕಾಲರಾ ತಡೆಗಟ್ಟಲು ನಡೆಸಿದಂತಹ ಪ್ರಯೋಗವನ್ನು ನೆರಡಿ ರೋಗದಿಂದ ನರಳುತ್ತಿದ್ದ ಕುರಿಗಳ ಮೇಲೂ ಪ್ಯಾಶ್ಚರ್ ಮುಂದುವರಿಸಿದ. ಅಂಥ್ರಾಕ್ಸ್ ಬ್ಯಾಸಿಲ್ಲೈಗಳು ಶಕ್ತಿಗುಂದುವಂತೆ ಮಾಡಿ, ಅವುಗಳಿಂದ ತಯಾರಿಸಿದ ಮಿಶ್ರಣವನ್ನು ರೋಗ ತಗುಲದ ಕುರಿಗಳಿಗೆ ನೀಡಿ ನಂತರ ರೋಗಕಾರಕ ತಳಿಯಿರುವ ಬ್ಯಾಸಿಲ್ಲೈಗಳನ್ನು ಕೊಟ್ಟರೂ ಅವುಗಳಲ್ಲಿ ರೋಗ ಪ್ರಕಟವಾಗದಿರುವುದನ್ನು ಶ್ರುತಪಡಿಸಿದ. ಈ ಎಲ್ಲಾ ಫಲಿತಾಂಶಗಳನ್ನು ಆಗಿನ ಹೆಸರಾಂತ ವೈದ್ಯಕೀಯ ಪತ್ರಿಕೆಗಳಲ್ಲಿಯೂ ಪ್ರಕಟಿಸಿದ.

ಯಃಕಶ್ಚಿತ್ ರಸಾಯನಶಾಸ್ತ್ರದ ತಜ್ಞನೊಬ್ಬ ಪ್ರಾಣಿಗಳ ಮೇಲೆ ಪ್ರಯೋಗ ನಡೆಸಿ ಲೇಖನಗಳನ್ನು ಪ್ರಕಟಿಸಿದ್ದು ಫ್ರಾನ್ಸಿನ ವೈದ್ಯ ಲೋಕವನ್ನು ಧೃತಿಗೆಡಿಸಿತು. ಅವರು ಅವನ ಪ್ರಯೋಗ ಮತ್ತು ಫಲಿತಾಂಶಗಳನ್ನು ಅಲ್ಲಗಳೆದು ಅಪಪ್ರಚಾರಕ್ಕಿಳಿದರು. ಸಿದ್ಧಾಂತವನ್ನು ಬಹಿರಂಗವಾಗಿ ಪ್ರದರ್ಶಿಸಬೇಕು. ಇಲ್ಲವೇ ಕತ್ತಿವರಸೆಗೆ ತಯಾರಾಗಬೇಕೆಂಬುದು ವೈದ್ಯನೊಬ್ಬನ ಸವಾಲಾಯಿತೆಂದರೆ, ಪ್ಯಾಶ್ಚರ್ ಬಗೆಗೆ ವೈದ್ಯರಲ್ಲಿ ಎಷ್ಟು ವಿರೋಧವೇರ್ಪಟ್ಟಿತ್ತೆಂಬುದರ ಅರಿವಾಗಬಹುದು. ತಾನು ಶ್ರಮಿಸುತ್ತಿರುವುದು ಹಾನಿಕಾರಕ ರೋಗಗಳ ನಿರ್ಮೂಲನೆಗೆ ಹೊರತು ಯಾರ ವಿನಾಶಕ್ಕೂ ಅಲ್ಲವೆಂದು ಉತ್ತರಿಸಿದ ಪ್ಯಾಶ್ಚರ್, ತನ್ನ ಪ್ರಯೋಗಗಳನ್ನು ಬಹಿರಂಗವಾಗಿ ಮಾಡಿ ತೋರಿಸಲು ಸಂತೋಷದಿಂದ ಒಪ್ಪಿಕೊಂಡನು.

೧೮೮೨ರ ಮೇ ತಿಂಗಳಲ್ಲಿ ವಿಶಾಲ ಮೈದಾನವೊಂದರಲ್ಲಿ ಅಸಂಖ್ಯಾತ ಕುರಿ ಪೋಷಕರು, ವೈದ್ಯರು, ಪಶು ವೈದ್ಯರು ಮತ್ತು ಸಾರ್ವಜನಿಕರು ನೆರೆದಿದ್ದರು. ಒಳ್ಳೆಯ ಆರೋಗ್ಯ ಸ್ಥಿತಿಯ ೫೦ ಕುರಿಗಳನ್ನು ತಂದು ತಲಾ ೨೫ ರಂತೆ ಎರಡು ಗುಂಪುಗಳಾಗಿ ವಿಂಗಡಿಸಲಾಯಿತು. ಮೊದಲ ಗುಂಪಿನ ಕುರಿಗಳಿಗೆ ಅಶಕ್ತ ಅಂಥ್ರಾಕ್ಸ್ ಬ್ಯಾಸಿಲೈಗಳಿಂದ ತಯಾರಿಸಿದ ಲಸಿಕೆಯನ್ನು ಪ್ಯಾಶ್ಚರ್ ಚುಚ್ಚಿದ. ಎರಡನೇ ಗುಂಪಿನ ಕುರಿಗಳಿಗೆ ಲಸಿಕೆಯನ್ನು ಕೊಡಲಿಲ್ಲ. ಮುಂದಿನ ಹದಿನೈದು ದಿನಗಳು ಎಲ್ಲಾ ಕುರಿಗಳನ್ನು ವಿರೋಧಿಗಳೇ ನೋಡಿಕೊಳ್ಳುವ ಏರ್ಪಾಡು ಸಹ ಆಯಿತು. ಹದಿನೈದು ದಿನಗಳ ನಂತರ ಮೊದಲಗುಂಪಿನ ಕುರಿಗಳಿಗೆ ಇನ್ನೊಂದು ಸಾರಿ ಅಂತಹದೇ ಲಸಿಕೆಯನ್ನು ಅವರೆದುರಿಗೇ ಚುಚ್ಚಿದ. ಇನ್ನೆರಡು ವಾರಗಳ ನಂತರ ಮೊದಲು ಸೇರಿದ್ದವರ ಎದುರಿನಲ್ಲೇ ಎಲ್ಲಾ ೫೦ ಕುರಿಗಳಿಗೂ ರೋಗಕಾರಕ ಅಂಥ್ರಾಕ್ಸ್ ಬ್ಯಾಸಿಲೈಗಳಿರುವ ಲಸಿಕೆಯನ್ನು ಚುಚ್ಚಲಾಯಿತು.

ಪ್ರಯೋಗದ ಅಂತಿಮ ಫಲಿತಾಂಶಗಳ ವೀಕ್ಷಣೆ ಇನ್ನೆರಡು ವಾರಗಳ ನಂತರ ನಡೆಯಿತು. ಮೊದಲು ಸೇರಿದ್ದ ಮಹನೀಯರೆಲ್ಲರೂ ಕುತೂಹಲದಿಂದ ಅಲ್ಲಿ ನೆರೆದಿದ್ದರು. ಎರಡು ಸಾರಿ ರೋಗ ನಿರೋಧಕ ಚುಚ್ಚು ಮದ್ದನ್ನು ನೀಡಿದ್ದ ಎಲ್ಲಾ ೨೫ ಕುರಿಗಳೂ ಆರೋಗ್ಯದಿಂದ ಲವಲವಿಕೆಯಿಂದ ಓಡಾಡಿಕೊಂಡಿದ್ದವು. ಎರಡನೇ ಗುಂಪಿನ ೨೫ ಕುರಿಗಳು ನೆರಡಿ ರೋಗದಿಂದ ನರಳಿ ಸತ್ತು ಬಿದ್ದಿದ್ದವು ! ಪ್ಯಾಶ್ಚರ್‌ನ ವಿರೋಧಿಗಳು

ಬೆಪ್ಪಾಗಿ ತಮ್ಮ ತಪ್ಪನ್ನು ಬಹಿರಂಗವಾಗಿ ಒಪ್ಪಿಕೊಳ್ಳಲೇಬೇಕಾಯಿತು. ಅವರೆಲ್ಲರೂ ಅವನ ಕ್ಷಮೆ ಕೇಳಿದರು. ಅರಿಯದೇ ಮಾಡಿದ ತಪ್ಪುಗಳನ್ನು ಭಗವಂತನೇ ಮನ್ನಿಸುವನೆಂದು ಪ್ಯಾಶ್ಚರ್ ಅವರನ್ನು ಸಾಂತ್ವನಗೊಳಿಸಿ ತನ್ನ ಉದಾರತೆಯನ್ನು ಪ್ರಕಟಗೊಳಿಸಿದ.

**ರೇಬೀಸ್ ರೋಗದ ಸಮಸ್ಯೆ :**

ರೇಬೀಸ್ (*Rabis, Hydrophobia*, ನಾಯಿಹುಚ್ಚು, ನೀರಂಜಿಕೆ, ಹೆಕಲಿರೋಗ) ರೋಗ ಅನಾದಿಕಾಲದ ಸಮಸ್ಯೆ. ಅದೊಂದು ಸಾಂಕ್ರಾಮಿಕ ರೋಗವೆಂಬುದು ಅರಿಸ್ಟಾಟಲ್ ಮತ್ತು ಹಿಪೋಕ್ರೇಟಸ್‌ರ ಕಾಲದಿಂದಲೂ ತಿಳಿದಿತ್ತು. ಹುಚ್ಚುನಾಯಿ ಕಚ್ಚುವುದರಿಂದ ಅದು ಹರಡುತ್ತದೆಂಬುದೂ ತಿಳಿದ ವಿಷಯ. ಅದರ ಚಿಕಿತ್ಸೆ ಮತ್ತು ಹತೋಟಿಯ ಬಗೆಗೆ ನಾನಾ ಮೂಢನಂಬಿಕೆಗಳು ಪ್ರಚಲಿತವಾಗಿವೆ. ಹುಚ್ಚು ನಾಯಿಯ ಲಿವರ್ ತಿನ್ನುವುದು, ಕ್ರಿಕೇಷಿಯನ್ ಎಂಬ ಮೀನಿನ ಸಾರು ಕುಡಿಯುವುದು, ಸಮುದ್ರ ಸ್ನಾನ, ಡಿಪ್ಪೆ ಎಂಬ ಊರಿನ ಮರಳಲ್ಲಿ ಹೊರಳಾಡುವುದು, ಹೊಬರ್ಟ್‌ನಲ್ಲಿರುವ ದೇವಮಂದಿರಕ್ಕೆ ಹರಕೆ—ಇತ್ಯಾದಿ ನಂಬಿಕೆಗಳು ಈಗಲೂ ಪ್ರಚಲಿತವಿರಬಹುದು. ಆದರೆ ರೇಬೀಸ್ ರೋಗ ತಗಲಿದವರನ್ನು ಬದುಕಿಸಲು ಈವರೆಗೂ ಯಾರಿಗೂ ಸಾಧ್ಯವಾಗಿಲ್ಲ.

ನಾಯಿ ಕಚ್ಚಿದಾಗ ಉಂಟಾಗುವ ಗಾಯವನ್ನು ಕಾದ ಕಬ್ಬಿಣದ ಸಲಾಕೆಯಿಂದ ಸುಡುವ ವಿಷಯವನ್ನು ಲೇರೊ (*Leroux*) ಎಂಬ ವೈದ್ಯ ಸೂಚಿಸಿದ್ದ. ಅದು ಒಂದಲ್ಲ ಒಂದು ರೀತಿಯಲ್ಲಿ ಈಗಲೂ ಪ್ರಚಾರದಲ್ಲಿದೆ. ರೇಬೀಸ್ ರೋಗ ತಗುಲಿದವರ ವಿಚಿತ್ರಯಾತನೆ, ನರಳಾಟವನ್ನು ನೋಡಲಾಗದೆ ಕತ್ತುಹಿಸುಕಿಯೋ, ರಕ್ತಸ್ರಾವ ಮಾಡಿಸಿಯೋ ಸಾಯಿಸುವ ಪದ್ಧತಿಯೂ ಕೆಲವೆಡೆ ಇತ್ತು.

ರೇಬೀಸ್ ರೋಗದ ಭಯಂಕರ ಸ್ವರೂಪವನ್ನು ಅರಿಯಲು ಅದರ ರೂಪರೇಷೆಗಳತ್ತ ಸ್ವಲ್ಪ ಗಮನಹರಿಸಬೇಕಾಗುತ್ತದೆ. ಹುಚ್ಚುನಾಯಿಯ ಜೊಲ್ಲಿನಲ್ಲಿರುವ ವೈರಸ್ (*Virus*) ಗಳೆಂಬ ಅತ್ಯಂತ ಸೂಕ್ಷ್ಮ ಜೀವಕಣಗಳೇ ಅದಕ್ಕೆ ಕಾರಣವೆಂಬುದು ಈಗ ಖಚಿತವಾಗಿದೆ. ಬ್ಯಾಕ್ಟೀರಿಯಾಗಳಿ

ಗಿಂತಲೂ ಸಾವಿರಾರು ಪಾಲು ಕಿರಿದಾಗಿರುವ ವೈರಸ್‌ಗಳು ಸಾಮಾನ್ಯ ಸೂಕ್ಷ್ಮದರ್ಶಕದಲ್ಲಿ ಗೋಚರಿಸುವುದಿಲ್ಲ. ಇತ್ತೀಚಿನ ಸಂಶೋಧನೆಯಾದ ಎಲೆಕ್ಟ್ರಾನಿಕ್ ಸೂಕ್ಷ್ಮದರ್ಶಕದಿಂದ ಮಾತ್ರ ಗುರುತಿಸಲು ಸಾಧ್ಯ. ಹುಚ್ಚು ಹಿಡಿದ ಪ್ರಾಣಿಯ ಜೊಲ್ಲಿನಿಂದ ಗಾಯವನ್ನು ಸೇರಿದ ವೈರಸ್‌ಗಳು ನರ ಮಂಡಲದ ಶಾಖೋಪಶಾಖೆಗಳ ಮೂಲಕ ಮೆದುಳಿಗೆ ತಲುಪಿ ಅಲ್ಲಿ ನರ ಕಣಗಳನ್ನು ನಾಶಪಡಿಸುವುದರಿಂದ ರೋಗ ಉದ್ಭವವಾಗುತ್ತದೆ. ರೋಗಿಗೆ ಮೊದಲು ಜ್ವರ, ತಲೆನೋವು, ಗಂಟಲುನೋವುಂಟಾಗಿ ಮುಂದಿನ ಒಂದೆ ರಡು ದಿನಗಳಲ್ಲಿ ವಿಪರೀತ ಬಾಯಾರಿಕೆಯಾದಂತಾಗುತ್ತದೆ. ಆದರೆ ನೀರನ್ನು ಕಂಡರೆ ಎಲ್ಲಿಲ್ಲದ ಅಂಜಿಕೆ. ಅದರ ಶಬ್ದ ಅಥವಾ ಹೆಸರನ್ನು ಹೇಳಿದರೂ ಗಂಟಲ ಮಾಂಸಖಂಡ ಮತ್ತು ಸ್ನಾಯುಗಳ ಸೆಳೆತವುಂಟಾಗುತ್ತದೆ. ನೀರು ಬಾಯಿಗೆ ಸೋಕಿದರಂತೂ ಸೆಳೆತ ವಿಪರೀತವಾಗಿ ನುಂಗುವುದಕ್ಕೇ ಆಗುವು ದಿಲ್ಲ. ಮುಂದೆ ಉಸಿರಾಡಲೂ ಕಷ್ಟವಾಗಿ ವಿಚಿತ್ರಯಾತನೆಯಿಂದ ರೋಗ ತಗುಲಿದ ೫–೬ ದಿನಗಳಲ್ಲೇ ಅಸುನೀಗುತ್ತಾನೆ. ರೇಬೀಸ್ ತಗುಲಿದವ ರನ್ನು ಇಲ್ಲಿಯವರೆಗೂ ಬದುಕಿಸಲು ಯಾರಿಂದಲೂ ಸಾಧ್ಯವಾಗಿಲ್ಲವೆಂದರೆ ಸಮಸ್ಯೆ ಎಷ್ಟು ಜಟಿಲವೆಂಬುದರ ಅರಿವಾಗಬಹುದು. ರೋಗ ಬರದಂತೆ ತಡೆಗಟ್ಟುವುದೊಂದೇ ಉಳಿದಿರುವ ಮಾರ್ಗ.

ಲೂಯಿ ಪ್ಯಾಶ್ಚರ್ ಬಾಲಕನಾಗಿದ್ದಾಗ ನಡೆದ ಘಟನೆಯೊಂದು ರೇಬೀಸ್‌ನ ಸಂಶೋಧನೆಗೆ ಪ್ರಚೋದನೆ ನೀಡಿತೆನ್ನಬಹುದು. ೧೮೩೧ರ ಸಮಯದಲ್ಲಿ ಅವನ ಹಳ್ಳಿಯಲ್ಲಿ ಹುಚ್ಚು ತೋಳವೊಂದರ ಹಾವಳಿ ವಿಪ ರೀತವಾಗಿತ್ತು. ಅದು ಕಚ್ಚಿದ ಹಲವಾರು ಮನುಷ್ಯರು ಮತ್ತು ಪ್ರಾಣಿಗಳು ಸತ್ತಿದ್ದೂ ಅವನಿಗೆ ತಿಳಿದಿತ್ತು. ಅವನ ಮನೆಯ ಪಕ್ಕದ ಕುಲುಮೆಯೊಂದ ರಲ್ಲಿ ತೋಳ ಕಚ್ಚಿದ ನಿಕೋಲ್ ಎಂಬ ಬಾಲಕನನ್ನು ನಾಲ್ಕಾರು ಜನ ಒತ್ತಿ ಹಿಡಿದುಕೊಂಡು ಗಾಯವನ್ನು ಕಾದ ಕಬ್ಬಿಣದಿಂದ ಸುಡುತ್ತಿದ್ದ ದೃಶ್ಯ ಅಚ್ಚಳಿಯದಂತಿತ್ತು. ನಿಕೋಲ್‌ನ ಚೀತ್ಕಾರ ಪ್ಯಾಶ್ಚರ್‌ನ ಮನಃಪಟಲ ದಿಂದ ಕದಲಲೇ ಇಲ್ಲ. ಆ ದಿನ ತೋಳ ಕಚ್ಚಿದ ಎಂಟು ಜನರಲ್ಲಿ ನಿಕೋಲ್ ಒಬ್ಬನೇ ಬದುಕಿದವನು. ಹಲವಾರು ಜೀವಜಂತುಗಳ ರೋಗಗಳಿಗೆ ಪರಿ

ಹಾರ ಕಂಡುಹಿಡಿದ ಪ್ಯಾಶ್ಚರ್‌ನ ಗಮನ ರೇಬೀಸ್‌ನತ್ತ ಸ್ವಾಭಾವಿಕವಾಗಿ ಹರಿಯಿತು.

ರೇಬೀಸ್ ರೋಗದ ಸಂಶೋಧನೆ ಇತರ ರೋಗಗಳಂತೆ ಸರಳವಾಗಿ ರಲು ಸಾಧ್ಯವಿಲ್ಲ. ವೈರಸ್‌ಗಳನ್ನು ಸೂಕ್ಷ್ಮ ದರ್ಶಕಯಂತ್ರದಲ್ಲಿ ಗುರುತಿಸಲು ಸಾಧ್ಯವಾಗಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಪ್ರಯೋಗದಲ್ಲಿ ಸಾಕ್ಷಾತ್ ಹುಚ್ಚು ನಾಯಿಗಳನ್ನು ಬಳಸಬೇಕಾಗಿದ್ದು ಸ್ವಲ್ಪ ಅಚಾತುರ್ಯ ನಡೆದರೆ ಅವನಿಗಾಗಲಿ ಅಥವಾ ಅವನ ಸಿಬ್ಬಂದಿಗಳಿಗಾಗಲಿ ಸಾವು ತಪ್ಪಿದ್ದಲ್ಲ. ಆದರೆ ಪ್ಯಾಶ್ಚರ್‌ನಂತಹ ಧೀರೋದಾತ್ತ ವಿಜ್ಞಾನಿ ಸಾವಿಗೆ ಅಂಜಲಿಲ್ಲ.

ನಾಯಿಗಳಲ್ಲಿ ರೇಬೀಸ್ ರೋಗದ ರೂಪುರೇಷೆಗಳನ್ನು ಹತ್ತಿರದಿಂದ ಅಭ್ಯಸಿಸುವುದು ಪ್ಯಾಶ್ಚರ್‌ನ ಮೊದಲ ಯೋಜನೆ. ಪಶು ವೈದ್ಯನೊಬ್ಬನ ಸಹಾಯದಿಂದ ಅಂತಹ ಎರಡು ಹುಚ್ಚು ನಾಯಿಗಳನ್ನು ಹಿಡಿದು ತರಿಸಿ ರೋಗ ಲಕ್ಷಣಗಳನ್ನು ಅಭ್ಯಸಿಸಿದ. ಸ್ವತಃ ತಾನೇ ಅವುಗಳ ಬಾಯಿಗೆ ಗಾಜಿನ ನಳಿಕೆಗಳನ್ನು ತೂರಿಸಿ ಇನ್ನೊಂದು ತುದಿಯಲ್ಲಿ ಅವನ ಬಾಯಿಂದಲೇ ಜೊಲ್ಲು ರಸ ನಳಿಕೆಯಲ್ಲಿ ಬರುವಂತೆ ಎಳೆದ. ಇದಕ್ಕಿಂತ ಹುಚ್ಚುತನ ಬೇರಿರಲಾರದು ! ಆ ಜೊಲ್ಲು ರಸವನ್ನು ಚೆನ್ನಾಗಿರುವ ನಾಯಿಗಳಿಗೆ ಚುಚ್ಚಿ ಅವುಗಳಲ್ಲಿ ರೇಬೀಸನ್ನುಂಟು ಮಾಡುವುದು ಅವನ ಉದ್ದೇಶವಾಗಿತ್ತು. ಮೊದಲ ಕೆಲವು ಪ್ರಯತ್ನಗಳು ಅವನ ನಿರೀಕ್ಷೆಯಂತೆ ಫಲಪ್ರದವಾಗದಿದ್ದರೂ ಪ್ಯಾಶ್ಚರ್ ತನ್ನ ಕಾರ್ಯಕ್ರಮವನ್ನು ಕೈ ಬಿಡಲಿಲ್ಲ.

ಮುಂದಿನ ಕೆಲವು ಪ್ರಯೋಗಗಳಲ್ಲಿ ಪ್ಯಾಶ್ಚರ್ ಹುಚ್ಚು ನಾಯಿಗಳ ಜೊಲ್ಲನ್ನು ಒಳ್ಳೆಯ ನಾಯಿಗಳಿಗೆ ಸೋಂಕಿಸಿ ಅವುಗಳಲ್ಲಿ ರೇಬೀಸನ್ನು ಉತ್ಪತ್ತಿ ಮಾಡುವಲ್ಲಿ ಯಶಸ್ವಿಯಾದ. ಅವುಗಳನ್ನು ಮೊದಲಿನಿಂದಲೂ ಅಭ್ಯಸಿಸಿ, ರೇಬೀಸ್ ಕಾಯಿಲೆಯ ಗುಣಲಕ್ಷಣಗಳನ್ನು ಟಿಪ್ಪಣಿ ಮಾಡಿದ. ಅಂತಹ ನಾಯಿಗಳು ಸತ್ತ ನಂತರ ಶವ ಪರೀಕ್ಷೆ ನಡೆಸಿ ವೈರಸ್‌ಗಳ ಕಾರ್ಯಕ್ಷೇತ್ರ ಹಿಮ್ಮೆದುಳು (*Medulla Oblongata*) ಎಂಬುದನ್ನು ಖಚಿತ ಮಾಡಿದ. ರೇಬೀಸ್ ಗಾಯದ ಮೂಲಕ ಶರೀರವನ್ನು ಸೇರಿದ ನಂತರ ನರಜಾಲದ ಮೂಲಕ ತನ್ನ ಕಾರ್ಯಕ್ಷೇತ್ರವಾದ ಹಿಮ್ಮೆದುಳನ್ನು ಸೇರಲು ಬಹಳ ಕಾಲಾವಕಾಶ ಬೇಕಾಗುವುದರಿಂದಲೇ, ನಾಯಿ ಕಚ್ಚಿದ ದಿನಕ್ಕೂ,

ರೋಗ ಪ್ರಕಟವಾಗುವ ದಿನಕ್ಕೂ ಹೆಚ್ಚು ಅಂತರವಿರುವುದಕ್ಕೂ ವಿವರಣೆಯೂ ದೊರೆತಂತಾಯಿತು.

ನಾಯಿಗಳಲ್ಲಿ ಅತ್ಯಲ್ಪ ಸಮಯದಲ್ಲೇ ರೋಗ ಬರಿಸಿದಲ್ಲಿ ಪ್ರಯೋಗಗಳನ್ನು ಚುರುಕಾಗಿ ಮಾಡಿ ಫಲಿತಾಂಶಗಳನ್ನು ಕಡಿಮೆ ಸಮಯದಲ್ಲಿ ಪಡೆಯಬಹುದೆಂಬ ಉದ್ದೇಶದಿಂದ ಪ್ಯಾಶ್ಚರ್ ಅವುಗಳ ಹಿಮ್ಮೆದುಳಿಗೆ ನೇರವಾಗಿ ಹುಚ್ಚು ನಾಯಿಯ ಜೊಲ್ಲು ರಸವನ್ನು ಚುಚ್ಚುವ ಯೋಜನೆ ಹಾಕಿದ. ನಾಯಿಯೊಂದಕ್ಕೆ ಕ್ಲೋರೋಫಾರಂ ಅರಿವಳಿಕೆಯನ್ನುಂಟು ಮಾಡಿ, ಅದರ ಹಿಮ್ಮೆದುಳನ್ನು ಶಸ್ತ್ರ ಚಿಕಿತ್ಸೆಯಿಂದ ಪ್ರತ್ಯೇಕಿಸಿ, ಅಲ್ಲಿಗೆ ನೇರವಾಗಿ ಹುಚ್ಚುನಾಯಿಯ ಜೊಲ್ಲನ್ನು ಸೋಂಕಿಸಿದ. ಹದಿನಾಲ್ಕು ದಿನಗಳಲ್ಲಿ ಅದರಲ್ಲಿ ರೇಬೀಸ್‌ನ ಲಕ್ಷಣಗಳು ಪ್ರಕಟವಾಗಿ, ಮುಂದಿನ ಕೆಲವು ದಿನಗಳಲ್ಲಿ ಅಸು ನೀಗಿತು. ರೇಬೀಸ್ ರೋಗಲಕ್ಷಣಗಳನ್ನು ಸರಿಯಾಗಿ ಗುರುತಿಸಲು ಇದರಿಂದ ಸಾಧ್ಯವಾಯಿತಲ್ಲದೆ ವೈರಸ್ ಹಿಮ್ಮೆದುಳನ್ನು ತಲುಪಿದ ನಂತರ ೧೪ ದಿನಗಳಾದರೂ ಬೇಕಾಗುತ್ತದೆಂಬುದು ಖಚಿತವಾಯಿತು. ಈ ಎಲ್ಲಾ ಪ್ರಯೋಗಗಳಿಂದ ರೇಬೀಸ್‌ಗೆ ಕಾರಣವಾದ ರೋಗಾಣುಗಳನ್ನು ಪ್ರತ್ಯಕ್ಷವಾಗಿ ತೋರಿಸಲಾಗದಿದ್ದರೂ, ರೇಬೀಸ್‌ಗೆ ಸೂಕ್ಷ್ಮಜೀವಾಣುಗಳೇ ಕಾರಣವೆಂಬುದು ಖಚಿತವಾಯಿತು.

ಇತರ ರೋಗಾಣುಗಳಂತೆ ರೇಬೀಸ್ ರೋಗಾಣುಗಳನ್ನು ಪ್ರಯೋಗಾಲಯದಲ್ಲಿ ಬೆಳೆಸುವ ಪ್ರಯತ್ನ ಮುಂದಿನ ಕಾರ್ಯಕ್ರಮ. ಆದರೆ ಕೃತಕ ಆಹಾರ ಮಿಶ್ರಣಗಳಲ್ಲಿ ಬೆಳೆಸುವ ಅವನ ಪ್ರಯತ್ನಗಳೆಲ್ಲಾ ವಿಫಲವಾದವು. ಪ್ರಯೋಗಾಲಯದ ಇತರ ಪ್ರಾಣಿಗಳ ಮೆದುಳಿನಲ್ಲಿ ಅವುಗಳನ್ನು ಬೆಳೆಸಲು ಸಾಧ್ಯವಾಗಬಹುದೆಂಬ ಆಸೆಯಿಂದ ಪ್ರಯೋಗಾಲಯದ ಮೊಲಗಳ ಮೆದುಳಿಗೆ ವೈರಸ್‌ಗಳಿರಬಹುದಾದ ಜೊಲ್ಲನ್ನು ಚುಚ್ಚಿದ. ಮೊಲಗಳಲ್ಲಿ ನಾಯಿಗಿಂತ ಅತಿ ಶೀಘ್ರವಾಗಿ ಪ್ರಕಟವಾದುದು ಅವನಿಗಿನ್ನೂ ಉತ್ತೇಜನಕೊಟ್ಟಿತು. ರೋಗದಿಂದ ಮೊಲಗಳು ಸತ್ತ ಮೇಲೆ, ಮೆದುಳನ್ನು ತೆಗೆದು ಒಣಗಿಸಿ ಪುಡಿಮಾಡಿ ಅದರಿಂದ ಲಸಿಕೆ ತಯಾರು ಮಾಡಿ, ಇನ್ನೂ ಕೆಲವು ಮೊಲಗಳ ಮೆದುಳಿಗೆ ಚುಚ್ಚಿದಾಗ ರೋಗ ಪ್ರಕಟವಾಗುವ ಅವಧಿ ಕ್ರಮೇಣ ಕಡಿಮೆಯಾಗುವುದು ಕಂಡುಬಂದಿತು. ಹೀಗೆ ವೈರಸ್

ಗಳನ್ನು ಒಂದು ಮೊಲದ ಮೆದುಳಿನಿಂದ ಇನ್ನೊಂದಕ್ಕೆ ಹಾಯಿಸುವ ವಿಧಾನ(*Serial Passage Through Animals*)ದಿಂದ ಕೇವಲ ಏಳೇ ದಿನಗಳಲ್ಲಿ ರೇಬೀಸ್ ಪ್ರಕಟವಾಗುವಂತೆ ಮಾಡಲಾಯಿತು. ಹೀಗೆ ಹಾಯಿಸುವುದರಿಂದ ಹೆಚ್ಚು ಬಿರುಸಿನ ರೋಗಕಾರಕ ಶಕ್ತಿಯ ವೈರಸ್‌ಗಳನ್ನು ಉತ್ಪಾದಿಸುವ ತತ್ವವೂ ಉದಯವಾಯಿತು.

ಹೀಗೆ ರೇಬೀಸ್ ವೈರಸ್‌ನ ತಳಿಯನ್ನು ಅಭಿವೃದ್ಧಿಪಡಿಸಿದ ನಂತರ ಪ್ಯಾಶ್ಚರ್‌ನ ಮಹತ್ವಾಕಾಂಕ್ಷೆ ಮನುಷ್ಯರಲ್ಲಿ ಆ ರೋಗವನ್ನು ತಡೆಗಟ್ಟುವ ವಿಧಾನಗಳ ಬಗೆಗೆ ಶೋಧನೆ. ಕುರಿಗಳಲ್ಲಿ ನೆರಡಿರೋಗ ತಗುಲದಂತೆ ಮಾಡಲು ನಡೆಸಿದ ಪ್ರಯೋಗಗಳ ಹಿನ್ನೆಲೆಯಲ್ಲಿ ವೈರಸ್‌ಗಳ ರೋಗಕಾರಕ ಶಕ್ತಿಕುಂದಿಸುವ ಉಪಾಯಗಳನ್ನು ಕಂಡುಹಿಡಿಯಬೇಕಾಯಿತು. ಅದಕ್ಕಾಗಿ ರೇಬೀಸ್‌ನಿಂದ ಸತ್ತ ಮೊಲದ ಮೆದುಳಿನ ಸ್ವಲ್ಪ ಭಾಗವನ್ನು ಜೀವಿಶುದ್ಧೀಕರಣ (*Sterilised*) ಮಾಡಿದ ಶೀಷೆಗಳಲ್ಲಿ ಒಣಗಿಸಲಿಟ್ಟನು. ರೋಗಕಾರಕ ಸತ್ವ ಸಂಪೂರ್ಣ ಕಡಿಮೆಯಾಗಲು ಹದಿನಾಲ್ಕು ದಿನಗಳು ಹಿಡಿಯುತ್ತದೆಂಬುದು ಸತತ ಪ್ರಯೋಗಗಳಿಂದ ತಿಳಿಯಿತು. ಇದೇ ರೀತಿ ಒಂದನೇ ದಿನದಿಂದ ಹದಿನಾಲ್ಕನೇ ದಿನದವರೆಗೂ ಒಣಗಲು ಇರಿಸಿದ್ದ ಬೇರೆ ಬೇರೆ ಶೀಷೆಗಳಿದ್ದ ಮೆದುಳಿನ ಭಾಗಗಳಿಂದ ಲಸಿಕೆಯನ್ನು ತಯಾರಿಸಿ ನಾಯಿಯೊಂದಕ್ಕೆ ಮೊದಲ ದಿನ, ಹದಿನಾಲ್ಕು ದಿನ ಇರಿಸಿದ್ದ ಮೆದುಳಿನ ಲಸಿಕೆಯನ್ನು, ಎರಡನೇ ದಿನ ಹದಿಮೂರು ದಿನದ ಮೆದುಳಿನ ಲಸಿಕೆಯನ್ನು ಕೊಡುತ್ತಾ ಕ್ರಮೇಣ ಹದಿನಾಲ್ಕನೇ ದಿನ, ಒಂದೇ ದಿನ ಒಣಗಿಸಿದ ಮೆದುಳಿನ ಲಸಿಕೆ ಚುಚ್ಚಿದನು. ಕೊನೆಯದಾಗಿ ಅದೇ ದಿನ ರೇಬೀಸ್‌ನಿಂದ ಸತ್ತ ಮೊಲದ ಮೆದುಳಿನಿಂದ ತಯಾರಿಸಿದ ಲಸಿಕೆಯನ್ನು ಚುಚ್ಚಲಾಯಿತು. ಆ ನಾಯಿಯಲ್ಲಿ ರೇಬೀಸ್‌ನ ಲಕ್ಷಣಗಳು ಪ್ರಕಟಗೊಳ್ಳಲಿಲ್ಲ. ಅದನ್ನು ಹುಚ್ಚು ನಾಯಿಗಳಿಂದಲೂ ಕಚ್ಚಿಸಿದ. ಕೊನೆಗೆ ಅದರ ಹಿಮ್ಮೆದುಳಿಗೆ ರೋಗಕಾರಕ ವೈರಸ್‌ಗಳಿರುವ ಮಿಶ್ರಣವನ್ನು ಚುಚ್ಚಿದರೂ, ಅದರಲ್ಲಿ ರೇಬೀಸ್ ಕಾಣಿಸಿಕೊಳ್ಳಲಿಲ್ಲ. ಅದೊಂದು ಅದ್ಭುತ ಸಾಧನೆಯೇ ಸರಿ. ಪ್ಯಾಶ್ಚರ್ ಬಹಳ ಕಾಲದಿಂದ ಪಡುತ್ತಿದ್ದ ಶ್ರಮಕ್ಕೆ ಪ್ರತಿಫಲವೆನ್ನಬಹುದು.

ನಾಯಿಗಳಲ್ಲಿ ರೇಬೀಸನ್ನು ತಡೆಗಟ್ಟುವುದು ಮುಂದಿನ ಹೆಜ್ಜೆ. ಅದಕ್ಕಾಗಿ ಪ್ರತಿಯೊಂದು ನಾಯಿಗೂ ಹದಿನಾಲ್ಕು ದಿನಗಳಿಗಾಗುವಷ್ಟು ಲಸಿಕೆ ತಯಾರಾಗಬೇಕು. ದೇಶದಲ್ಲಿರುವ ನಾಯಿಗಳಿಗೆಲ್ಲಾ ಇದನ್ನು ಕೊಡುವ ಆಶಯ ಅವನದು. ಪ್ರಯೋಗಾಲಯ ಅದಕ್ಕಾಗಿ ಸಜ್ಜಾಯಿತು. ಹೆಚ್ಚು ಮೊಲಗಳು, ಹೆಚ್ಚು ಜನರಿಗೆ ರಾತ್ರಿ ಹಗಲು ಎಡಬಿಡದ ಕೆಲಸ. ಆದಷ್ಟು ನಾಯಿಗಳಿಗೆ ಆ ರೀತಿ ಲಸಿಕೆ ನೀಡಿದರೂ ಅವನ ಉದ್ದೇಶ ಸಾಧನೆಗೆ ಅಪಾರ ಹಣ ಮತ್ತು ಸಮಯ ಬೇಕಾಗುವುದೆಂಬುದನ್ನು ಅರಿತ ಪ್ಯಾಶ್ಚರ್ ಮುಂದೆ ನಾಯಿ ಕಚ್ಚಿದ ಮನುಷ್ಯರಿಗೆ ಇದರಿಂದ ಉಪಯೋಗವಾಗುವಂತಾದರೆ ತನ್ನ ಉದ್ದೇಶ ಸಾಧನೆಯಾಗಬಹುದೆಂದು ಆ ಬಗೆಗೆ ತನ್ನ ಗಮನಹರಿಸಿದ.

ರೇಬೀಸ್ ರೋಗ ನಿವಾರಕ ಲಸಿಕೆಯ ಸಂಶೋಧನೆ ಪ್ರಾಣಿಗಳಲ್ಲಿ ಯಶಸ್ವಿಯಾಗಿ ನಿರ್ಣಾಯಕ ಘಟ್ಟವನ್ನು ತಲ್ಪಿದ್ದರೂ, ಮಾನವ ಪ್ರಯೋಗ ಜಟಿಲವಾದ ಸಮಸ್ಯೆಯಾಗಿತ್ತು. ಪ್ರಾಣಿಗಳಲ್ಲಿ ನಡೆಸಿದಂತಹ ವಿಸ್ಮಯಕಾರಕ ಪ್ರಯೋಗಕ್ಕೆ ಮುಂದೆ ಬರುವವರಿಲ್ಲ. ಬಂದರೂ ಸ್ವಲ್ಪ ವ್ಯತ್ಯಾಸವಾದರೆ ಅದರ ಪರಿಣಾಮಗಳನ್ನು ಊಹಿಸುವುದು ಅಸಾಧ್ಯ. ಸಂಶೋಧನೆಯ ದೃಷ್ಟಿಯಿಂದ ಇನ್ನೊಬ್ಬ ಮಾನವನ ಜೀವವನ್ನು ಪಣವಾಗಿಡಲು ಅವನ ಮನಸ್ಸೊಪ್ಪುತ್ತಿರಲಿಲ್ಲ. ಸಂಶೋಧನೆಗಳನ್ನು ಈಗಿರುವ ಮಟ್ಟದಲ್ಲೇ ನಿಲ್ಲಿಸಿದರೆ ಮಾನವ ಕಲ್ಯಾಣವಾಗಬಹುದಾದಂತ ವಿಧಾನ ನಶಿಸಿ ಹೋಗುತ್ತದೆಂಬ ಆತಂಕ ಬೇರೆ. ಅದರಿಂದ ತಾನೇ ಅಂತಹ ಪ್ರಯೋಗದ ಮೊದಲ ವ್ಯಕ್ತಿಯಾಗುವುದಾಗಿ ನಿರ್ಧಾರ ಮಾಡಿದ ! ವೈದ್ಯಕೀಯ ಇತಿಹಾಸದಲ್ಲಿ ಮಾನವ ಕಲ್ಯಾಣಕ್ಕಾಗಿ ಆತ್ಮಾರ್ಪಣೆ ಮಾಡಿದ ಕೆಲವೇ ಜನರ ಸಾಲಿಗೆ ಸೇರುವ ಮಹದಾಶೆಯವನೆನಿಸುತ್ತದೆ.

**ಜೋಸೆಫ್ ಮೀಸ್ಟರ್ :**

ಲೂಯಿ ಪ್ಯಾಶ್ಚರ್ ತನ್ನ ಮೇಲೆ ಪ್ರಯೋಗಕ್ಕಾಗಿ ಲಸಿಕೆಗಳ ತಯಾರಿಯಲ್ಲಿದ್ದಾಗಲೇ, ಹುಚ್ಚು ನಾಯಿ ಕಡಿದ ಜೋಸೆಫ್ ಮೀಸ್ಟರ್ ಎಂಬ ಬಾಲಕನೊಬ್ಬನನ್ನು ಪ್ರಯೋಗಾಲಯಕ್ಕೆ ತರಲಾಯಿತು.

ಜೋಸೆಫ್ ಮೀಸ್ಟರ್ ಅಲಸಾಕ್ ಎಂಬ ತನ್ನ ಹಳ್ಳಿಯಿಂದ ಶಾಲೆಗೆ ತೆರಳುತ್ತಿದ್ದಾಗ ಹುಚ್ಚು ನಾಯಿಯೊಂದು ಮೇಲೆರಗಿ ಮೈತುಂಬಾ ಗಾಯ

ಗಳಾದವು. ಗಾಬರಿಗೊಂಡ ತಂದೆ-ತಾಯಿಗಳು ಅವರ ಹಳ್ಳಿಯ ವೈದ್ಯ ವೇಬರ್‌ನಲ್ಲಿಗೆ ಚಿಕಿತ್ಸೆಗೆ ಕೊಂಡು ಹೋದರು. ಗಾಯಗಳನ್ನು ಕಾರ್ಬಾಲಿಕ್ ಆಸಿಡ್‌ನಿಂದ ಸುಟ್ಟು ಚಿಕಿತ್ಸೆ ಮಾಡಿದ ವೇಬರ್, ಜೋಸೆಫ್ ಮೈಮೇಲೆ ಇದ್ದ ಗಾಯಗಳ ತೀವ್ರತೆಯನ್ನು ನೋಡಿ, ಅವನು ಬದುಕುವ ಬಗೆಗೆ ಅನುಮಾನ ವ್ಯಕ್ತಪಡಿಸಿದ. ವೇಬರ್ ಕೆಲದಿನಗಳ ಹಿಂದೆ ಪ್ಯಾರಿಸ್‌ಗೆ ಹೋಗಿದ್ದಾಗ ಲೂಯಿ ಪ್ಯಾಶ್ಚರ್ ನಾಯಿಗಳಿಗೆ ಹುಚ್ಚು ಹಿಡಿಯದಿರಲು ಮಾಡುತ್ತಿದ್ದ ಪ್ರಯೋಗಗಳು ಯಶಸ್ವಿಯಾಗುತ್ತಿದ್ದ ವಿಷಯ ತಿಳಿದಿದ್ದ. ಜೋಸೆಫ್‌ನನ್ನು ಪ್ಯಾರಿಸ್‌ಗೆ ಕರೆದೊಯ್ದರೆ ಪ್ರಯೋಜನವಾಗಬಹುದೆಂಬ ಸಲಹೆ ನೀಡಿದ. ನಿರ್ಗತಿಕರಾದ ಜೋಸೆಫ್‌ನ ಪಿತೃಗಳಿಗೆ ಊರವರು ಸಹಾಯ ಮಾಡಿ ಪ್ಯಾರಿಸ್‌ಗೆ ಕಳುಹಿಸುವ ಏರ್ಪಾಡು ಮಾಡಿದನು,

ಜೋಸೆಫ್ ಮೀಸ್ಟರ್ ತನ್ನ ತಾಯಿಯೊಡನೆ ಪ್ಯಾರಿಸ್ ತಲುಪುವುದರೊಳಗೆ ಮೂರು ದಿನ ಕಳೆದಿದ್ದವು. ಮೈತುಂಬಾ ಗಾಯಗಳಿದ್ದ ಜೋಸೆಫ್‌ನನ್ನು ನೋಡಿ ಪ್ಯಾಶ್ಚರ್ ಮಮ್ಮಲ ಮರುಗಿದನು. ಮೊದಲ ಮಾನವ ಪ್ರಯೋಗಕ್ಕೆ ಅವರು ತಯಾರಾಗಿ ಬಂದಿದ್ದರೂ ಜೋಸೆಫ್‌ನಮೇಲೆ ಅದನ್ನು ಜರುಗಿಸಲು ಪ್ಯಾಶ್ಚರ್ ಮಾನಸಿಕವಾಗಿ ತಯಾರಾಗಿರಲಿಲ್ಲ, ಅವನಿಗೆ ನಿಜವಾದ ಸತ್ವಪರೀಕ್ಷೆಯ ಸಮಯ. ಸಹೋದ್ಯೋಗಿಗಳು ಈ ಅವಕಾಶವನ್ನು ಬಿಡಬಾರದೆಂದು ಸಲಹೆ ಮಾಡಿದರು. ಜೊತೆಗೆ ಫ್ರೆಂಚ್ ಸರ್ಕಾರದವರು ಪ್ಯಾಶ್ಚರ್‌ನ ಸಂಶೋಧನೆಗಳ ಮಹತ್ವವನ್ನು ಅಭ್ಯಸಿಸಲು ನೇಮಿಸಿದ್ದ ಉಲ್ಪಿಯನ್ ಎಂಬ ತಜ್ಞ ಜೋಸೆಫ್‌ನ ಮೇಲೆ ತಯಾರುಮಾಡಿಕೊಂಡಿದ್ದ ಲಸಿಕೆಯನ್ನು ಪ್ರಯೋಗಿಸುವಂತೆ ಒತ್ತಾಯ ಮಾಡಿದನು. ಪ್ಯಾಶ್ಚರ್ ಲಸಿಕೆಯ ಪ್ರಯೋಗದಿಂದಾಗಬಹುದಾದ ಪರಿಣಾಮಗಳನ್ನು ಜೋಸೆಫ್‌ನ ತಾಯಿಗೆ ವಿವರಿಸಿ, ಲಸಿಕೆಗಳನ್ನು ಅವನಿಗೆ ನೀಡುವ ಮನಸ್ಸು ಮಾಡಿದ.

ಆ ದಿನದಿಂದಲೇ ಜೋಸೆಫ್ ಮೀಸ್ಟರ್‌ಗೆ ಲಸಿಕೆ ನೀಡುವ ಕಾರ್ಯ ಪ್ರಾರಂಭವಾಯಿತು. ತನ್ನ ಪ್ರಯೋಗಾಲಯದಲ್ಲೇ ಅವರಿಬ್ಬರಿಗೂ ಊಟ, ವಸತಿಯ ಏರ್ಪಾಡು ಮಾಡಿ ತಾನು ಹಗಲೂ ರಾತ್ರಿ ಅಲ್ಲೇ ಇರಲು ಪ್ರಾರಂಭಿಸಿದ, ಜೋಸೆಫ್‌ನಲ್ಲಿ ಅಪಾರ ಕರುಣೆ, ಜೊತೆಗೆ ಲಸಿಕೆ ನೀಡುವುದರಿಂದ ಅವನ ಜೀವಕ್ಕೆ ಅಪಾಯವಾಗಬಾರದೆಂಬ ಅಭಿಲಾಷೆ. ಲಸಿಕೆ ಮುಗಿ

ಯುವ ಕೊನೆ ದಿನಗಳಲ್ಲಿ ಸ್ವಲ್ಪ ಜ್ವರ ಕಾಣಿಸಿಕೊಂಡಿತು. ಪ್ಯಾಶ್ಚರ್‌ನ ಮನಸ್ಸಿನಲ್ಲಿ ದುಗುಡ ಎದ್ದು ಕಾಣುತ್ತಿತ್ತು. ರಾತ್ರಿ ಇಡೀ ನಿದ್ದೆಮಾಡದೇ ಬಾಲಕನ ಪಕ್ಕದಲ್ಲೇ ಕುಳಿತು ಕಾಲ ಕಳೆದ. ಹದಿನಾಲ್ಕನೇ ದಿನದ ಲಸಿಕೆ ನೀಡುವ ಸಮಯದಲ್ಲಿ ತನ್ನ ಸ್ನೇಹಿತರು ಮತ್ತು ಇತರ ಗಣ್ಯರನ್ನು ಅಲ್ಲಿಗೆ ಕರೆಸಿ ಅವರೆದುರು ಕೊನೆಯ ಚುಚ್ಚುಮದ್ದನ್ನು ಕೊಟ್ಟು ಆ ಪದ್ಧತಿಯ ಯಶಸ್ಸಿನ ಬಗೆಗೆ ತನ್ನ ಆತ್ಮವಿಶ್ವಾಸ ವ್ಯಕ್ತಪಡಿಸಿದ.

ಚಿಕಿತ್ಸೆ ಮುಗಿದ ಎರಡು ವಾರಗಳವರೆಗೂ ಜೋಸೆಫ್‌ನನ್ನು ಪ್ರಯೋಗಾಲಯದಲ್ಲೇ ಇರಿಸಿಕೊಂಡು ರೇಬೀಸ್‌ನ ಚಿಹ್ನೆಗಳು ಪ್ರಕಟವಾಗುತ್ತವೆಯೋ ಎಂದು ವೀಕ್ಷಿಸಿದನು. ಬಾಲಕನ ಆರೋಗ್ಯ ಬಹಳಷ್ಟು ಸುಧಾರಿಸಿತಲ್ಲದೆ, ಎಲ್ಲರ ಅಚ್ಚುಮೆಚ್ಚಿನವನಾಗಿದ್ದು ಪ್ರಯೋಗಾಲಯದಲ್ಲಿ ಕೇಕೆ ಹಾಕಿ ನಲಿದಾಡುತ್ತಿರುವ ದೃಶ್ಯ ಪ್ಯಾಶ್ಚರ್‌ಗೆ ಅತ್ಯಂತ ಆನಂದದಾಯಕ ವಿಷಯವಾಯಿತು. ಎರಡುವಾರ ರಾತ್ರೀ ಹಗಲು ದಣಿದಿದ್ದ ಪ್ಯಾಶ್ಚರ್‌ಗೆ ವಿಶ್ರಾಂತಿಯ ಆವಶ್ಯಕತೆಯನ್ನು ಅರಿತ ಸಹೋದ್ಯೋಗಿಗಳು ಬೇರೊಂದು ಊರಿಗೆ ಹೋಗುವಂತೆ ಒತ್ತಾಯಪಡಿಸಿದರು. ನಂಬಿಕೆಯ ಸಹೋದ್ಯೋಗಿಯೊಬ್ಬರು ತಾವೇ ಖುದ್ದು ಅವನನ್ನು ನೋಡಿಕೊಂಡು ಅವನ ಸ್ಥಿತಿಯ ಬಗೆಗೆ ಪ್ರತಿ ದಿನ ತಂತಿ ಸಂದೇಶ ಕಳುಹಿಸುವ ಭರವಸೆ ನೀಡಿದ ನಂತರವೇ ಪ್ಯಾಶ್ಚರ್ ವಿಶ್ರಾಂತಿಗಾಗಿ ಪ್ಯಾರಿಸ್‌ನಿಂದ ಹೊರಟದ್ದು. ಒಂದು ತಿಂಗಳ ನಂತರ ಪ್ರಯೋಗಾಲಯಕ್ಕೆ ಹಿಂದಿರುಗಿದಾಗ ಜೋಸೆಫ್ ಮೀಸ್ಟರ್‌ನ ಸ್ಥಿತಿ ಅತ್ಯಂತ ತೃಪ್ತಿದಾಯಕವಾಗಿದ್ದು, ಪ್ಯಾಶ್ಚರ್ ಅವನನ್ನು ಬೀಳ್ಕೊಟ್ಟನು

ಪ್ಯಾಶ್ಚರ್ ರೇಬೀಸ್‌ನ ನಿಯಂತ್ರಣಕ್ಕೆ ಯಶಸ್ವಿಯಾಗಿ ನಡೆಸಿದ ಮಾನವ ಪ್ರಯೋಗ ಪ್ರಚಾರವಾದಂತೆಲ್ಲಾ ದೇಶದ ನಾನಾ ಕಡೆಗಳಿಂದ ಹುಚ್ಚು ನಾಯಿ ಕಡಿದವರು ಪ್ಯಾರಿಸ್‌ಗೆ ಧಾವಿಸಲಾರಂಭಿಸಿದರು. ಹೆಚ್ಚಿನ ಪ್ರಮಾಣದಲ್ಲಿ ಲಸಿಕೆಯನ್ನು ತಯಾರಿಸಲು ಪ್ರಯೋಗಾಲಯ ಮತ್ತೇ ಸಜ್ಜುಗೊಳ್ಳಬೇಕಾಯಿತು.

**ಜುಪಿಲ್ಲೇ :**

ಹದಿನಾಲ್ಕು ವರ್ಷ ಪ್ರಾಯದ ಜುಪಿಲ್ಲೇ ಜುರಾ ಪ್ರಾಂತದ ಹಳ್ಳಿ

ಯೊಂದರ ಕುರುಬರ ಮಗ. ಸ್ನೇಹಿತರ ಜೊತೆ ಕುರಿ ಮಂದೆಯನ್ನು ಕಾಯು ತ್ತಿದ್ದಾಗ ಹುಚ್ಚು ನಾಯಿಯೊಂದು ಎಲ್ಲರ ಮೇಲೂ ಹಾರಿ ಕಚ್ಚತೊಡಗಿತು. ಅಲ್ಲಿದ್ದವರಲ್ಲಿ ಸ್ವಲ್ಪ ದೃಢಕಾಯನಾದ ಜುಪಿಲ್ಲೇ ನಾಯಿಯನ್ನು ತನ್ನ ಚಾಟಿಯಿಂದ ತಳಿಸಲಾರಂಭಿಸಿದ. ಅದು ಅವನ ಮೇಲೂ ಜಿಗಿದು ಕಚ್ಚಲಾ ರಂಭಿಸಿತು. ಧೈರ್ಯಗುಂದದ ಜುಪಿಲ್ಲೇ ನಾಯಿಯನ್ನು ಕೆಳಗುರುಳಿಸಿ ಅದರ ಮುಸುಡಿಯನ್ನು ಅದುಮಿ ಹಿಡಿದು ಚಾಟಿಯಿಂದ ಬಲವಾಗಿ ಕಟ್ಟಿ ದನು. ಕಾಲುಗಳನ್ನು ಹಿಡಿದು ದರದರನೆ ಹತ್ತಿರವಿದ್ದ ಹಳ್ಳವೊಂದಕ್ಕೆ ಎಳೆದುಕೊಂಡು ಹೋಗಿ ಅದು ಸಾಯುವವರೆಗೂ ನೀರಿನಲ್ಲಿ ಅದುಮಿ ಹಿಡಿದ. ಅದನ್ನು ಊರಿಗೆ ಎಳೆದುಕೊಂಡು ಹೋಗಿ ಬೀದಿಗಳಲ್ಲಿ ಮೆರವಣಿಗೆ ಮಾಡಿ ತನ್ನ ಶೌರ್ಯ ಪ್ರದರ್ಶಿಸಿ ಎಲ್ಲರ ಮೆಚ್ಚುಗೆ ಪಡೆದ. ಆದರೆ ಅಲ್ಲಿಯವರೆಗೆ ಅವನ ಮೈಮೇಲಾದ ಗಾಯಗಳ ಪರಿವೇ ಅವನಿಗಿರಲಿಲ್ಲ. ಊರ ಜನ ಅವನ ಗಾಯಗಳನ್ನು ನೋಡಿ ಮರುಗಿದರು. ಅದು ಹುಚ್ಚು ನಾಯಿಯೆಂಬುದನ್ನು ಖಚಿತಪಡಿಸಿಕೊಂಡು, ಜುಪಿಲ್ಲೇಯ ಭವಿಷ್ಯದ ಬಗೆಗೆ ಊರಿನ ಮೇಯರ್ ಜೊತೆ ಚರ್ಚಿಸಿದರು. ಮೇಯರ್ ಕೆಲವು ದಿನಗಳ ಹಿಂದೆ ಪ್ಯಾರಿಸ್‌ಗೆ ಪ್ಯಾಶ್ಚರ್‌ನ ಭೇಟಿ ಮಾಡುವ ಅವಕಾಶ ವಿದ್ದು, ರೇಬೀಸ್ ನಿವಾರಣೆಯ ಬಗೆಗೆ ಅವನು ನಡೆಸಿದ ಪ್ರಯೋಗದ ಯಶಸ್ಸನ್ನು ಅರಿತುಕೊಂಡಿದ್ದ. ಜುಪಿಲ್ಲೇಯನ್ನು ಪ್ಯಾರಿಸ್ಸಿಗೆ ಕಳುಹಿಸು ವುದು ಸೂಕ್ತವೆಂದು, ಪ್ಯಾಶ್ಚರ್‌ನ ಅನುಮತಿಗಾಗಿ ಪತ್ರ ಬರೆದ.

ಕಾಗದ ಪತ್ರ ವಿನಿಮಯವಾಗಿ ಜುಪಿಲ್ಲೇ ಪ್ಯಾರಿಸ್ ತಲುಪುವಲ್ಲಿ ಆರು ದಿನಗಳು ಸಂದಿದ್ದವು. ವಿಳಂಬವಾಗಿ ಚಿಕಿತ್ಸೆ ಆರಂಭವಾಗುತ್ತಿದ್ದುದ ರಿಂದ ಫಲಿತಾಂಶದ ಬಗೆಗೆ ಅನುಮಾನದಿಂದಲೇ ಪ್ಯಾಶ್ಚರ್ ಚಿಕಿತ್ಸೆ ಶುರು ಮಾಡಿದ. ಹದಿನಾಲ್ಕು ಚುಚ್ಚುಮದ್ದುಗಳು ಅನುಕ್ರಮವಾಗಿ ಕೊಡಲ್ಪಟ್ಟವು. ಯಾವ ತೊಡಕುಗಳೂ ಆಗದೇ ಜುಪಿಲ್ಲೇ ಊರಿಗೆ ಹಿಂದಿರುಗಿದ; ಜುಪಿಲ್ಲೇ ನಾಯಿಯೊಡನೆ ವೀರಾವೇಶದಿಂದ ಹೋರಾಡಿದ ಕತೆಯನ್ನು ಕೇಳಿದ್ದ ಪ್ಯಾಶ್ಚರ್, ಅವನು ನಾಯಿಯೊಡನೆ ಹೋರಾಡುತ್ತಿದ್ದ ದೃಶ್ಯದ ಶಿಲಾ ವಿನ್ಯಾಸವನ್ನು ಪ್ರಯೋಗಾಲಯದಲ್ಲಿ ಸ್ಥಾಪಿಸಿ, ಜುಪಿಲ್ಲೇಯ ಕೀರ್ತಿ ಯನ್ನು ಅಮರಗೊಳಿಸಿದ.

## ಮೆಚ್ಚಿಗೆ

ರೇಬೀಸ್ ರೋಗದ ವಿರುದ್ಧ ಪ್ಯಾಶ್ಚರ್ ತಯಾರಿಸುತ್ತಿದ್ದ ಲಸಿಕೆಯ ಪರಿಣಾಮದ ಬಗೆಗೆ ಪ್ಯಾಶ್ಚರ್‌ಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವ ಅನುಮಾನವೂ ಇಲ್ಲದಂತಾಯಿತು. ಪ್ರಮುಖ ವೈದ್ಯಕೀಯ ಪತ್ರಿಕೆಗಳಲ್ಲಿ ತನ್ನ ಸಂಶೋಧನೆಯ ವಿವರಗಳನ್ನು ಪ್ರಕಟಿಸಿದನು. ಪ್ಯಾರಿಸ್‌ನಲ್ಲಿ ನಡೆದ ವಿಜ್ಞಾನಿಗಳ ಸಮ್ಮೇಳನದಲ್ಲಿ ವಿಶೇಷ ಆಹ್ವಾನಿತನಾಗಿ, ಸಂಶೋಧನೆಯ ಫಲಿತಾಂಶಗಳ ಬಗೆಗೆ ವಿವರವಾದ ಭಾಷಣ ಮಾಡಿದನು. ಮಾನವ ಜನಾಂಗಕ್ಕೆ ವರಪ್ರಸಾದವಾದಹಾಗೂ ವೈದ್ಯಕೀಯ ಇತಿಹಾಸದಲ್ಲಿ ಎಂದೆಂದೂನಡೆಯದ ಮಹತ್ಸಾದನೆಯ ಬಗೆಗೆ, ಅಲ್ಲಿ ನೆರೆದಿದ್ದ ವಿಜ್ಞಾನಿಗಳು ಹಾಡಿಹೊಗಳಿದರು. ಸ್ವತಃ ವೈದ್ಯನಾಗದಿದ್ದರೂ ಪ್ಯಾಶ್ಚರ್, ವೈದ್ಯಕೀಯ ಕ್ಷೇತ್ರಕ್ಕೂ, ಮಾನವ ಕೋಟಿಗೂ ಮಾಡಿದ ಸಹಾಯ ಆಚಂದ್ರಾರ್ಕವಾಗಿ ಉಳಿಯುತ್ತದೆಂದು ಹಾರೈಸಿದರು.

ರೇಬೀಸ್ ವಿರುದ್ಧ ಪ್ಯಾಶ್ಚರ್ ಗಳಿಸಿದ ಜಯ ದೇಶವಿದೇಶಗಳಲ್ಲಿ ಪ್ರಚಾರವಾಯಿತು. ಯೂರೋಪಿನ ಮೂಲೆ ಮೂಲೆಗಳಿಂದಲ್ಲದೆ, ದೂರದ ಅಮೇರಿಕಾದಿಂದಲೂ ರೋಗಿಗಳು ಬರಲಾರಂಭಿಸಿದರು. ಹೆಚ್ಚಿನ ಬೇಡಿಕೆಗೆ ಲಸಿಕೆಯನ್ನು ಪೂರೈಸುವುದಕ್ಕಾಗಿ ಪ್ರಯೋಗಾಲಯ ವಿಸ್ತಾರಗೊಳ್ಳಬೇಕಾಯಿತು. ಲಸಿಕೆ ತಯಾರಿಕೆಗೆ ಅನುಕೂಲವಾಗುವಂತೆ ಅದರ ಒಂದು ಭಾಗವನ್ನೇ ಹವಾನಿಯಂತ್ರಣಗೊಳಿಸಲಾಯಿತು. ಪ್ರಯೋಗಾಲಯದ ತುಂಬೆಲ್ಲಾ ಜನ ಕಿಕ್ಕಿರಿದು ಸೇರಿರುತ್ತಿದ್ದು ಹಬ್ಬದ ವಾತಾವರಣದಂತಿರುತ್ತಿತ್ತು. ಪ್ಯಾಶ್ಚರ್ ನಿತ್ಯದ ಕೆಲಸದ ಜೊತೆಗೆ, ಅಲ್ಲಿಗೆ ಬರುವವರ ವಸತಿ ಮತ್ತು ಊಟ ಉಪಚಾರ ಏರ್ಪಡಿಸುವುದರಲ್ಲೇ ಮಗ್ನನಾಗಿರುತ್ತಿದ್ದ. ಮಕ್ಕಳೆಂದರೆ ಎಲ್ಲಿಲ್ಲದ ಆಸೆ ಅವನಿಗೆ. ಅವರ ಶುಶ್ರೂಷೆ ಅಪರಿಮಿತ ಆನಂದವನ್ನುಂಟುಮಾಡುತ್ತಿತ್ತು.

## ಲೂಯಿಸ್ ಪಲ್ಲೇ ಟಿಯೆರ್

ಪ್ಯಾಶ್ಚರ್ ಚಿಕಿತ್ಸೆ ಮಾಡಿದ ನೂರಾರು ರೋಗಿಗಳಲ್ಲಿ ಲೂಯಿಸ್ ಪಲ್ಲೇ ಟಿಯರ್ ಎಂಬ ಹತ್ತು ವರ್ಷದ ಬಾಲಕಿಯ ದುರಂತ ತುಂಬಾ

ಪರಿಣಾಮ ಬೇರಿತು. ಹುಚ್ಚು ನಾಯಿ ಕಚ್ಚಿ ಮೂವತ್ತೇಳು ದಿನಗಳು ಸಂದ ಮೇಲೆ ಅವಳ ಚಿಕಿತ್ಸೆ ಶುರುವಾಗಿದ್ದು. ಚಿಕಿತ್ಸೆಯ ಫಲಿತಾಂಶದ ಬಗೆಗೆ ಅನುಮಾನದಿಂದಲೇ ಪ್ಯಾಶ್ಚರ್ ಲಸಿಕೆ ನೀಡಲು ಆರಂಭಿಸಿದ. ಬಹುಶಃ ಆಕೆಯ ಚಿಕಿತ್ಸೆ ಫಲಕಾರಿಯಾಗದೆ ಕೆಟ್ಟ ಹೆಸರು ಬರಬಹುದೆಂದು ನಿರೀಕ್ಷಿಸಿದ್ದರೂ ಪ್ಯಾಶ್ಚರ್ ಆಕೆಗೆ ಚಿಕಿತ್ಸೆಯನ್ನು ನಿರಾಕರಿಸಲಿಲ್ಲ.

ಚಿಕಿತ್ಸೆ ಮುಗಿದ ಕೆಲವೇ ದಿನಗಳಲ್ಲಿ ಲೂಯಿಸಳಲ್ಲಿ ರೇಬೀಸ್‌ನ ಚಿಹ್ನೆಗಳು ಪ್ರಕಟವಾದವು. ಇದರಿಂದ ತಳಮಳಗೊಂಡ ಪ್ಯಾಶ್ಚರ್ ಇನ್ನೂ ಒಂದು ಅವಧಿಗೆ ಅದೇ ಲಸಿಕೆಯನ್ನು ನೀಡಲಾರಂಭಿಸಿದ. ಕಾಯಿಲೆ ಉಲ್ಬಣಾವಸ್ಥೆಗೆ ಏರುತ್ತಲೇ ಇತ್ತು. ಅತಿಯಾಗಿ ಪ್ರೀತಿಸುತ್ತಿದ್ದ ಲೂಯಿಸಳು ಅವನನ್ನು ಬಿಟ್ಟಿರಲು ಸಮ್ಮತಿಸುತ್ತಿರಲಿಲ್ಲ. ಅವಳ ಮನೋವೇದನೆಯನ್ನು ಅರಿತಿದ್ದ ಪ್ಯಾಶ್ಚರ್ ಅವಳು ಆಸುನೀಗುವವರೆಗೂ ಕಣ್ಣೀರು ಹಾಕುತ್ತಾ ಅವಳ ಪಕ್ಕದಲ್ಲೇ ಕುಳಿತಿರುತ್ತಿದ್ದ ದೃಶ್ಯ ಹೃದಯವಿದ್ರಾವಕ, ಅವಳ ತಂದೆ-ತಾಯಿಗಳನ್ನು ಸಾವಿನ ಬಗೆಗೆ ಸಂತೈಸುತ್ತಿದ್ದನಾದರೂ, ಅವಳನ್ನು ಬದುಕಿಸುವುದರಲ್ಲಿ ವಿಫಲನಾದುದಕ್ಕೆ ಅವರೆಲ್ಲರಿಗಿಂತಲೂ ಹೆಚ್ಚಿನ ಶೋಕತಪ್ತನಾದವನೇ ಪ್ಯಾಶ್ಚರ್. ಅವಳ ನೆನಪು ಕೊನೆಯ ಗಳಿಗೆಯವರೆಗೂ ಅವನಿಂದ ಮಾಸಿರಲಿಲ್ಲ. ಮುಂದೆ ಕೆಲವು ದಿನಗಳಲ್ಲಿ ಅಕೆಡೆಮಿ ಫ್ರಾನ್ಸಿಸ್ (*Academe Francise*)ಯವರು ಅವನ ಗೌರವಾರ್ಥ ಏರ್ಪಡಿಸಿದ ಸಭೆಯಲ್ಲಿ ನೆರೆದಿದ್ದ ವಿದ್ವಾಂಸರು ಹೊಗಳಿ ಪ್ರಚಂಡ ಕರತಾಡನ ಮಾಡುತ್ತಿದ್ದರೂ ಪ್ಯಾಶ್ಚರ್‌ನ ಮುಖದಲ್ಲಿ ಸಂತೋಷದ ಕುರುಹೇ ಇರಲಿಲ್ಲವಂತೆ. ಲೂಯಿಸಳ ದುರಂತ ಅವನ ಸಪ್ಪೆ ಮೋರೆಗೆ ಕಾರಣವಾಗಿತ್ತಂತೆ !

ಪ್ಯಾಶ್ಚರ್‌ನ ಸಾಧನೆ ಅವನಿಗೆ ಅಪಾರ ಕೀರ್ತಿ ಗೌರವಗಳನ್ನು ತಂದವು. ರಷ್ಯದ ಚಕ್ರವರ್ತಿ ಒಂದು ಲಕ್ಷ ಫ್ರಾಂಕುಗಳೇ ಅಲ್ಲದೆ ವಜ್ರದ ಪದಕವನ್ನೂ ದಯಪಾಲಿಸಿದನು. ಫ್ರೆಂಚ್ ಸರ್ಕಾರವಂತೂ ಆಗಾಗ ಅವನಿಗೆ ಬೇಕಾಗುವ ಧನಸಹಾಯ ಮಾಡುತ್ತಲೇ ಇತ್ತು. ಶೇಖರಣೆಯಾದ ಹಣದಿಂದ ಪ್ಯಾಶ್ಚರ್ ಇನ್ಸ್‌ಟಿಟ್ಯೂಟ್ (*Pasteur Institute*) ನಿರ್ಮಾಣವಾಯಿತು.

ಪ್ಯಾಶ್ಚರ್‌ನ ಎಪ್ಪತ್ತನೇ ಹುಟ್ಟು ಹಬ್ಬ ೧೮೯೨ರ ಡಿಸೆಂಬರ್‌ನಲ್ಲಿ ಫ್ರಾನ್ಸ್ ದೇಶಾದ್ಯಂತ ವೈಜೃಂಭಣೆಯಿಂದ ಆಚರಿಸಲಾಯಿತು. ಸೋರ್

ಬೋರ್ನ್ ನಗರದಲ್ಲಿ ನಡೆದ ಮುಖ್ಯ ಸಮಾರಂಭಕ್ಕೆ ಪ್ರಪಂಚದ ಮೂಲೆ ಮೂಲೆಗಳಿಂದ ವೈದ್ಯರು, ವಿಜ್ಞಾನಿಗಳು, ರಾಜಕಾರಣಿಗಳು ಆಗಮಿಸಿದ್ದರು, ಆಂಟಿಸೆಪ್ಟಿಕ್ ಯುಗಪ್ರವರ್ತಕ ಇಂಗ್ಲೆಂಡಿನ ಲಾರ್ಡ್ ಲಿಸ್ಟರ್ ತನ್ನ ಗೌರವ ಸಲ್ಲಿಸಲು ಅಲ್ಲಿದ್ದ. ಪಾರ್ಶ್ವವಾಯು ಪೀಡಿತನೂ, ವೃದ್ಧನೂ ಆಗಿದ್ದ ಪ್ಯಾಶ್ಚರ್ ಆಗ ಎದ್ದು ನಿಲ್ಲುವ ಸ್ಥಿತಿಯಲ್ಲಿರಲಿಲ್ಲ, ಸ್ವತಃ ಫ್ರಾನ್ಸಿನ ಅಧ್ಯಕ್ಷರು ಮತ್ತು ಲಾರ್ಡ್ ಲಿಸ್ಟರ್ ಅವನನ್ನು ವೇದಿಕೆಗೆ ಎತ್ತಿಕೊಂಡು ಬಂದಾಗ ಅಲ್ಲಿ ನೆರೆದಿದ್ದ ಅಪಾರ ಜನಸ್ತೋಮ ಎದ್ದು ನಿಂತು ಜಯಘೋಷ ದಿಂದ ಕಿವಿ ಬಿರಿಯುವಂತೆ ಕರತಾಡನ ಮಾಡಿತು. ಪ್ರಪಂಚದ ಹಲವಾರು ಮುಖಂಡರು ಅವನನ್ನು ಹೊಗಳಿ ಗೌರವಿಸಿದರು. ಆಂಟಿಸೆಪ್ಟಿಕ್ ನಿಯ ಮಗಳ ಉದ್ಭವಕ್ಕೆ ಪ್ಯಾಶ್ಚರ್ ಸಂಶೋಧನೆ ಮಾಡಿದ ಉಪಕಾರವನ್ನು ಹೊಗಳಿದ ಲಿಸ್ಟರ್ ವೇದಿಕೆಯಮೇಲೆ ಅವನನ್ನು ಆಲಂಗಿಸಿ ನಮಸ್ಕರಿಸಿದನು. ಮಾನವಕುಲ ಶ್ರೇಷ್ಠರಿಬ್ಬರ ಮಿಲನ ವಿಜ್ಞಾನದ ಏಕತೆಯ ಕುರುಹಾಗಿತ್ತು. ಮಾತನಾಡಲಾರದಷ್ಟು ಅಶಕ್ತನಾಗಿದ್ದ ಪ್ಯಾಶ್ಚರ್‌ನ ಸಂದೇಶವನ್ನು ಅವನ ಮಗ ಓದಬೇಕಾಯಿತು. ''ವಿಜ್ಞಾನ ಮತ್ತು ಶಾಂತಿ, ಅಜ್ಞಾನ ಮತ್ತು ಯುದ್ಧಗಳ ಮೇಲೆ ಅಂತಿಮ ಜಯಗಳಿಸುತ್ತವೆಂಬ ದೃಢನಂಬಿಕೆ ನನಗಿದೆ. ರಾಷ್ಟ್ರ ರಾಷ್ಟ್ರಗಳು ಎಲ್ಲರ ಉದ್ಧಾರಕ್ಕಾಗಿ ಸಹಕರಿಸಿ ಒಂದಾಗಲೆಂದು ಹಾರೈಸುತ್ತೇನೆ ; ರೋಗರುಜಿನಗಳಿಂದ ನರಳುವ ಜನತೆಯ ಉದ್ಧಾರಕ್ಕಾಗಿ ಶ್ರಮಪಡುವವರಿಗೆ ಭವಿಷ್ಯದಲ್ಲಿ ಒಳ್ಳೆಯ ಸ್ಥಾನಮಾನ ದೊರೆಯುತ್ತದೆ ಎಂಬುದೇ ನನ್ನ ನಂಬಿಕೆ''. ಈಗಲೂ ಪರಸ್ಪರ ಕಚ್ಚಾಡುವ ಮಾನವ ಸಂಕುಲಕ್ಕೆ ದಾರಿದೀಪವಾಗುವ ಸಂದೇಶ.

ತನ್ನ ಆರೋಗ್ಯವನ್ನು ಲಕ್ಷಿಸದೆ ನಾಲ್ಕು ದಶಕಗಳಿಗೂ ಮಿಕ್ಕಿ, ಮನುಷ್ಯ ಮತ್ತು ಇತರ ಜೀವರಾಶಿಗಳ ಕಲ್ಯಾಣಕ್ಕಾಗಿ ಅವಿರತ ಸಂಶೋಧನೆ ನಡೆಸಿ ಕೀರ್ತಿಶಾಲಿಯಾದ ಲೂಯಿ ಪ್ಯಾಶ್ಚರ್ ೧೮೯೫ರಲ್ಲಿ ಎಪ್ಪತ್ಮೂರನೇ ವಯಸ್ಸಿನಲ್ಲಿ ಅಸು ನೀಗಿದ. ನೆಚ್ಚಿನ ಬಾಳಸಂಗಾತಿ ಮೇರಿ ಕೊನೆಯವರೆಗೂ ಅವನ ಶುಶ್ರೂಷೆ ಮಾಡಿ ಕೃತಾರ್ಥಳಾದಳು. ಪ್ಯಾಶ್ಚರ್ ಇನ್‌ಸ್ಟಿಟ್ಯೂಟ್ ಆವರಣದಲ್ಲಿಯೇ ಸರ್ಕಾರೀ ಮರ್ಯಾದೆಗಳೊಂದಿಗೆ ಸಮಾಧಿಯಾಯಿತು.

ಸಮಾಧಿಯ ಗೋಡೆಗಳಲ್ಲಿ ಮಕ್ಕಳು, ನಾಯಿ, ಹಸು, ಕುರಿ ಮುಂತಾದುವು ಗಳ ಚಿತ್ರಣ ಕೊರೆದಿರುವುದು ಪ್ಯಾಶ್ಚರ್‌ಗೂ, ಸಕಲ ಜೀವರಾಶಿಗಳಿಗೂ ಇದ್ದ ಅಪಾರ ಪ್ರೀತಿಯ ಸಂಕೇತವಾಗಿದೆ.

# ಪೆನಿಸಿಲಿನ್

ಆಧುನಿಕ ವೈದ್ಯ ವಿಜ್ಞಾನದ ಪ್ರಗತಿ ಕಳೆದ ಒಂದು ಶತಮಾನದಿಂದ ಭರದಿಂದ ಸಾಗುತ್ತಿರುವುದರ ಸ್ಥೂಲ ಪರಿಚಯು ಹಿಂದಿನ ಪುಟಗಳಿಂದ ವೇದ್ಯವಾಗಿರಬಹುದು. ಈಗ ಅದು ಅತ್ಯುನ್ನತ ಶಿಖರವನ್ನೇರಿದೆಯೆಂದರೆ ಅತಿಶಯೋಕ್ತಿಯಲ್ಲ.

ರೋಗಕಾರಕ ಸೂಕ್ಷ್ಮಜೀವಾಣುಗಳ ಪತ್ತೆ ಕಳೆದ ಶತಮಾನದ ಅಂತ್ಯದ ಸಮಯಕ್ಕಾಯಿತು. ಅವುಗಳಿಂದ ರೋಗ ಹರಡುವುದನ್ನು ನಿಯಂತ್ರಿಸಲು ಆಂಟಿಸೆಪ್ಟಿಕ್ ನಿಯಮಗಳು ರೂಢಿಗೆ ಬಂದವು. ಮುಂದೆ ರೋಗ ನಿರೋಧಕ ಚಿಕಿತ್ಸಾ ಪದ್ಧತಿಯ ಉಗಮವೂ ಆಗಿ ಬಹುತೇಕ ರೋಗಗಳು ಹರಡದಂತೆ ಹಾಗೂ ಅವು ತಗುಲಿದರೂ ವ್ಯಕ್ತಿಯಲ್ಲಿ ಪ್ರಕಟವಾಗದಂತೆ ನಿಯಂತ್ರಿಸುವಂತಾದರೂ, ರೋಗ ಪ್ರಕಟವಾದಾಗ ವಾಸಿ ಮಾಡುವ ವಿಧಾನಗಳ ಶೋಧನೆಗೆ ಇನ್ನು ಕೆಲಕಾಲ ಹಿಡಿಯಿತು. ಅಗೋಚರ ಶತ್ರುಗಳೆನಿಸಿದ ರೋಗಾಣುಗಳ ವಿರುದ್ಧ ಪರಿಣಾಮಕಾರಿಯಾಗುವಂತಹ ಮದ್ದುಗಳ ಶೋಧನೆ ವಿಜ್ಞಾನಿಗಳ ಮುಂದಿನ ಗುರಿ.

ಜರ್ಮನಿಯ ಪಾಲ್ ಎರ್ಲಿಚ್ *(Paul Ehrlich)* ಈ ದಿಸೆಯಲ್ಲಿ ಹೆಜ್ಜೆ ಇಟ್ಟವರಲ್ಲಿ ಮೊದಲನೆಯವ. ಎರ್ಲಿಚ್ ಈ ಶತಮಾನದ ಆದಿಯಲ್ಲಿ ಮಾನವಕುಲ ಕಳಂಕವೆನಿಸಿದ ಮೇಹರೋಗ ಸಿಫಿಲಿಸ್‌ನ ಸ್ಪೈರೋಕೀಟ್ಸ್ ರೋಗಾಣುಗಳ ವಿರುದ್ಧ ಸಮರ ಸಾರಿದ. ನೂರಾರು ರಸಾಯನಿಕ ವಸ್ತುಗಳನ್ನು ಪ್ರಯೋಗಿಸಿ ೬೦೫ ಸಾರಿ ವಿಫಲನಾಗಿ ಸಹೋದ್ಯೋಗಿಗಳ ಕ್ರೋಧಕ್ಕೊಳಗಾಗಿದ್ದ. ಕೊನೆಯ ಪ್ರಯೋಗವೆಂದು ೬೦೬ ನೇ ಸಾರಿ ಆರ್ಸೆನಿಕನ್ನು ಬಳಸಿದಾಗ ಯಶ ದೊರೆಯಿತಂತೆ. ಅದೇ ಕೆಲವು ವರ್ಷಗಳ ಹಿಂದೆ ಸಿಫಿಲಿಸ್ ವಿರುದ್ಧ ಜನಪ್ರಿಯ ಮದ್ದಾಗಿದ್ದ ನಿಯೋಸಾಲ್ವರ್ಸಾನ್ ಅಥವಾ '೬೦೬'.

ಎರ್ಲಿಚ್ ಇತರ ರೋಗಾಣುಗಳ ಬಗೆಗೆ ನಡೆಸಿದ ಸಂಶೋಧನೆಗಳಿಂದ ಸಲ್‌ಫೋನಮೈಡ್ ಗುಂಪಿನ ಮದ್ದುಗಳು ಬೆಳಕಿಗೆ ಬಂದವು. ರೋಗಾಣುಗಳಿಗೆ ಬೇಕಾಗುವ ಆಹಾರಗಳ ನಮೂನೆಯ ರಚನೆಯನ್ನು ಹೋಲಿದ್ದ ಸಲ್‌ಫೋನಾಮೈಡ್‌ಗಳನ್ನು ಅವು ಕಬಳಿಸಿದಾಗ ಅದೇ ವಿಷವಾಗಿ ಪರಿಣಮಿಸಿ ಸಾಯುತ್ತಿದ್ದುದೇ ಈ ಗುಂಪಿನ ಮದ್ದುಗಳ ಗುಟ್ಟು. ಅವು ರೋಗಾಣುಗಳಿಗೆ ಹಾನಿಕರವಾದಂತೆ, ರೋಗಿಗೂ ಕೆಲ ಸಾರಿ ಉಪದ್ರವವನ್ನುಂಟು ಮಾಡುತ್ತಿದ್ದವು. ಅದರಲ್ಲೂ ಮೂತ್ರಜನಕಾಂಗಗಳಲ್ಲಿ ಗಂಭೀರ ಸ್ವರೂಪದ ತೊಡಕುಗಳನ್ನುಂಟು ಮಾಡುತ್ತಿದ್ದುದರಿಂದ ಅವುಗಳ ವ್ಯಾಪಕ ಬಳಕೆ ಅಸಾಧ್ಯವಾಯಿತು. ಇತರ ಹಲವಾರು ವಿಜ್ಞಾನಿಗಳು ಈ ದಿಸೆಯಲ್ಲಿ ಮುಂದುವರಿಸಿದ ಸಂಶೋಧನೆಗಳ ಪರಿಣಾಮ ಆಧುನಿಕ ಸಂಜೀವನಿಯೆನಿಸಿದ "ಪೆನಿಸಿಲಿನ್" (*Penicillin*) ಪ್ರಾಪ್ತವಾಯಿತು. ಈ ಗುಂಪಿನ ಮದ್ದಿರುವ ವಾತಾವರಣದಲ್ಲಿ ಸೂಕ್ಷ್ಮ ಜೀವಾಣುಗಳು ಬದುಕಲಾರವು. ಅದರಿಂದಲೇ ಈ ಗುಂಪಿನ ಮದ್ದುಗಳು ಜೀವಿರೋಧಕ ಅಥವಾ "ಆಂಟಿಬಯೋಟಿಕ್ಸ್" (*Antibiotics*) ಗಳೆಂದು ಪ್ರಸಿದ್ಧಿಯಾದವು. ಪೆನಿಸಿಲಿನ್‌ನ ಶೋಧನೆಯಾದ ಕೆಲವೇ ವರ್ಷಗಳಲ್ಲಿ ಸ್ಟ್ರೆಪ್ಟೊಮೈಸಿನ್, ಕ್ಲೋರಂಫೆನಿಕಾಲ್, ಟೆಟ್ರಸೈಕ್ಲಿನ್‌ನಂತಹ ವಿಶಾಲ ಕ್ರಿಯಾಶಕ್ತಿಯ ಹಲವಾರು ಜೀವಿರೋಧಕ ಮದ್ದುಗಳು ಬೆಳಕಿಗೆ ಬಂದವು.

ವೈಜ್ಞಾನಿಕ ಶೋಧನೆಗಳ ಸರಣಿಗಳಲ್ಲಿ "ಆಕಸ್ಮಿಕ ಶೋಧನೆ" (*Accidental Discovery*) ಗಳಾದ ನಿದರ್ಶನಗಳಿವೆ. ಅಂತಹ ಆಕಸ್ಮಿಕ ಶೋಧನೆಗಳ ಮಹತ್ವವನ್ನು ಅರ್ಥೈಸುವ ಬುದ್ಧಿವಂತಿಕೆ ವಿಜ್ಞಾನಿಗಿದ್ದರೆ ಅವುಗಳ ಪ್ರಯೋಜನ ಜನತೆಗೆ ಲಭಿಸಲು ಸಾಧ್ಯ. ಪೆನಿಸಿಲಿನ್ ಶೋಧನೆಯೂ ಒಂದು ಆಕಸ್ಮಿಕವೇ. ಅದರ ಜನಕ ಅಲೆಗ್ಸಾಂಡರ್ ಫ್ಲೆಮಿಂಗ್ ಪೆನಿಸಿಲಿನ್ ಮಹತ್ವವನ್ನು ಅರಿತಿದ್ದರೂ, ಅದು ವ್ಯಾಪಕ ಬಳಕೆಗೆ ಬರಲು ಹತ್ತಾರು ವರ್ಷಗಳೇ ಹಿಡಿದವು; ಹಲವಾರು ವಿಜ್ಞಾನಿಗಳು ವಿವಿಧ ಹಂತಗಳಲ್ಲಿ ಪಾಲ್ಗೊಂಡಿದ್ದರು. ಅಲೆಗ್ಸಾಂಡರ್ ಫ್ಲೆಮಿಂಗ್ ಅರ್ನೆಸ್ಟ್ ಚೈನ್ ಮತ್ತು ಹೋವಾರ್ಡ್ ಫ್ಲೋರೆ ಅವರಲ್ಲಿ ಮುಖ್ಯರು.

## ಅಲೆಗ್ಸಾಂಡರ್ ಫ್ಲೆಮಿಂಗ್ :

ಸ್ಕಾಟ್‌ಲೆಂಡ್‌ನ ಹಳ್ಳಿಯೊಂದರ ವ್ಯವಸಾಯ ಮತ್ತು ಹೈನುಗಾರಿಕೆಯ ಮನೆತನವೊಂದರಲ್ಲಿ ೧೮೮೧ರ ಆಗಸ್ಟ್‌ನಲ್ಲಿ ಅಲೆಗ್ಸಾಂಡರ್ ಫ್ಲೆಮಿಂಗ್‌ನ ಜನನ. ತಂದೆ ಹ್ಯೂಫ್ಲೆಮಿಂಗ್‌ಗೆ ವ್ಯವಸಾಯದ ಜೊತೆಗೆ ಶ್ರೀಮಂತರೊಬ್ಬರ ತೋಟದ ಮೇಲ್ವಿಚಾರಣೆ ಕೂಡ. ಆದರೂ ಬಡತನ. ಬಾಲ್ಯದ ವಿದ್ಯಾಭ್ಯಾಸ ಹಳ್ಳಿಯಲ್ಲಿ ಮುಗಿಯಿತು. ಅಲೆಗ್ಸಾಂಡರ್‌ಗೆ ವೈದ್ಯನಾಗಬೇಕೆಂಬ ಹಂಬಲವಿದ್ದರೂ, ತಂದೆಯ ಬಡತನ ಅದಕ್ಕೆ ಅಡ್ಡಿ ಬರುವಂತಿತ್ತು.

ಒಂದು ಮಧ್ಯಾಹ್ನ ಅಲೆಗ್ಸಾಂಡರ್ ಪಕ್ಕದ ಯಜಮಾನರ ತೋಟದಲ್ಲಿ ಆಡ್ತಾಡುತ್ತಿದ್ದಾಗ ಹತ್ತಿರದಲ್ಲಿದ್ದ ಕೊಳದಲ್ಲಿ ಬಾಲಕನೊಬ್ಬ ನೀರಲ್ಲಿ ಮುಳುಗುವ ದೃಶ್ಯ ಹಾಗೂ ಕೂಗು ಕೇಳಿಸಿತು. ಚೆನ್ನಾಗಿ ಈಜು ಬರುತ್ತಿದ್ದ ಅಲೆಗ್ಸಾಂಡರ್ ಕೊಳಕ್ಕೆ ಧುಮುಕಿ ಬಾಲಕನನ್ನು ಹೊರತಂದು ಬದುಕಿಸಿದ. ಆ ಬಾಲಕ ಬೇರಾರು ಅಲ್ಲದೆ ತೋಟದ ಮಾಲಿಕರ ಮಗನೇ, ಮುಂದೆ ವಿಶ್ವವಿಖ್ಯಾತ ರಾಜಕಾರಿಣಿಯಾದ ವಿನ್ಸಟನ್ ಚರ್ಚಿಲ್!

ವಿಷಯ ತಿಳಿದ ವಿನ್ಸಟನ್‌ನ ತಂದೆಯಿಂದ ಅಲೆಗ್ಸಾಂಡರ್‌ಗೆ ಮರುದಿನವೇ ಆಮಂತ್ರಣ, ಕೃತಜ್ಞತೆ ಸೂಚಿಸುವುದಕ್ಕಾಗಿ. ಜೀವ ಉಳಿಸಿದ್ದಕ್ಕಾಗಿ ಪ್ರತಿಫಲವನ್ನಪೇಕ್ಷಿಸದ ಅಲೆಗ್ಸಾಂಡರ್‌ಗೆ ಏನಾದರೂ ಉಪಕಾರ ಮಾಡಬೇಕೆಂಬುದು ವಿನ್ಸಟನ್ ತಂದೆಯ ಅಭಿಲಾಷೆ. ಅಂತೂ ಅಲೆಗ್ಸಾಂಡರ್ ವೈದ್ಯನಾಗಬೇಕೆಂದಿದ್ದ ಆಶಯವನ್ನು ಅನಂತರ ತಿಳಿದು ವೈದ್ಯಕೀಯ ಶಾಲೆಗೆ ಸೇರಿಸಲು ನೆರವಾದ. ಅಲೆಗ್ಸಾಂಡರ್ ಮತ್ತು ವಿನ್ಸಟನ್ ಆಮರಣಾಂತರ ಗೆಳೆಯರಾಗುಳಿದು ವಿಶ್ವವಿಖ್ಯಾತರಾದರು. ಲಂಡನ್‌ನ ಸೆಂಟ್ ಮೇರಿಸ್ ಹಾಸ್ಪಿಟಲ್‌ನ ಮೆಡಿಕಲ್ ಸ್ಕೂಲಿಗೆ ಸೇರಿ ೧೯೦೮ರಲ್ಲಿ ಉತ್ತಮ ಶ್ರೇಣಿಯಲ್ಲಿ ಅಲೆಗ್ಸಾಂಡರ್ ಫ್ಲೆಮಿಂಗ್ ವೈದ್ಯನಾದ.

ಹಲವಾರು ರೋಗಗಳಿಗೆ ಸೂಕ್ಷ್ಮ ಜೀವಾಣುಗಳೇ ಮೂಲಕಾರಣವೆಂಬುದು ಪ್ರಕಟವಾಗಿ, ಫ್ಲೆಮಿಂಗ್ ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗ ಅವುಗಳ ಬಗೆಗೆ ಹೆಚ್ಚು ಆಕರ್ಷಿತನಾಗಿದ್ದ. ವೈದ್ಯನಾದ ನಂತರ ಸೇಂಟ್ ಮೇರಿಸ್ ಆಸ್ಪತ್ರೆಯ ಹೆಸರಾಂತ ರೋಗಾಣು ಜೀವಿಶಾಸ್ತ್ರದ ತಜ್ಞ ಡಾ.

ರೈಟ್, ಫ್ಲೆಮಿಂಗ್‌ನನ್ನೆ ಸಹಾಯಕನಾಗಿ ಆರಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ರೈಟ್ ನಡೆಸುತ್ತಿದ್ದ ಹಲವಾರು ಪ್ರಯೋಗಗಳಲ್ಲಿ ಫ್ಲೆಮಿಂಗ್ ಅತ್ಯಂತ ಆಸಕ್ತಿಯಿಂದ ಭಾಗವಹಿಸಿ ಅವನ ಮೆಚ್ಚುಗೆಯನ್ನು ಪಡೆದ.

ಫ್ಲೆಮಿಂಗ್ ಕೆಲಸಕ್ಕೆ ಸೇರಿದ ಸ್ವಲ್ಪ ಸಮಯದಲ್ಲಿಯೇ ಮೊದಲ ಮಹಾಯುದ್ಧ ಆರಂಭವಾಯಿತು. ಮಿಲಿಟರಿ ವೈದ್ಯನಾಗುವ ಅವಕಾಶವೂ ದೊರೆಯಿತು. ರಣರಂಗದಲ್ಲಿ ಗಾಯಗೊಂಡವರಲ್ಲಿ ಕೀವಾಗಿ ನರಳುವ ಯಾತನೆಯ ಪ್ರತ್ಯಕ್ಷದರ್ಶನವಾಯಿತು. ಲಿಸ್ಟರ್ ಕೆಲವು ವರ್ಷಗಳ ಹಿಂದೆ ನಿರೂಪಿಸಿದ ಆಂಟಿಸೆಪ್ಟಿಕ್ ವಿಧಾನಗಳಿಂದ ನಿಯೋಜಿತ ಶಸ್ತ್ರ ಚಿಕಿತ್ಸಾ ಸಮಯದ ಗಾಯಗಳಲ್ಲಿ ರೋಗಾಣುಗಳ ಪ್ರವೇಶವನ್ನು ಕಡಿಮೆ ಮಾಡಬಹುದಿತ್ತು. ಯುದ್ಧದಂತಹ ಆಕಸ್ಮಿಕಗಳಲ್ಲಿ ಆಗುವ ಗಾಯಗಳಲ್ಲಿ ರೋಗಾಣುಗಳು ಬೆರೆಯುವುದು ಸ್ವಾಭಾವಿಕ. ಆದರೆ ಶರೀರದೊಳಗಡೆ ಮನೆ ಮಾಡಿದ ನಂತರ ಅವುಗಳ ಹನನಕ್ಕೆ ಬೇರೆ ಉಪಾಯಗಳಿರಲಿಲ್ಲ. ಈ ಬಗೆಗೆ ಸಂಶೋಧನೆ ನಡೆಸಬೇಕೆಂಬ ಸುಪ್ತ ಪ್ರಜ್ಞೆ ಫ್ಲೆಮಿಂಗ್‌ನಲ್ಲಿ ಆಗಲೇ ಮೂಡಿತು.

ಯುದ್ಧಾನಂತರ ಫ್ಲೆಮಿಂಗ್ ಸೆಂಟ್ ಮೇರಿಸ್ ಆಸ್ಪತ್ರೆಯ ಕೆಲಸಕ್ಕೆ ಹಿಂದಿರುಗಿದ. ಒಂದು ಬೆಳಿಗ್ಗೆ ಫ್ಲೆಮಿಂಗ್‌ಗೆ ವಿಪರೀತ ನೆಗಡಿ, ಮೂಗಲ್ಲಿ ನೀರು ಒಂದೇ ಸಮನೆ ಸುರಿಯುತ್ತಿತ್ತು. ಅದರಲ್ಲೇನಿರಬಹುದೆಂಬ ಕುತೂಹಲದಿಂದ ಒಂದು ತೊಟ್ಟನ್ನು ಸೂಕ್ಷ್ಮದರ್ಶಕದಲ್ಲಿ ಪರೀಕ್ಷಿಸಿದ. ಆಶ್ಚರ್ಯವೇನಿಲ್ಲ. ಮಾಮೂಲಿ ಸ್ಟೆಫೈಲೋ ಕಾಕೈ ರೋಗಾಣುಗಳು. ಮುಂದಿನ ನಾಲ್ಕೈದು ದಿನಗಳೂ ಮೂಗಿನ ದ್ರವದ ಪರೀಕ್ಷೆ ಯಾಂತ್ರಿಕವಾಗಿ ಮುಂದುವರಿಯಿತು. ನಾಲ್ಕನೆ ದಿನ ಸ್ಟೆಫೈಲೋ ಕಾಕೈಗಳೇ ಅಲ್ಲದೆ ಇನ್ನೊಂದು ತರಹದ ಹಳದಿ ಸೂಕ್ಷ್ಮಾಣು ಅಲ್ಲಿ ಪ್ರತ್ಯಕ್ಷ. ಫ್ಲೆಮಿಂಗ್ ಇನ್ನೂ ಸ್ವಲ್ಪ ಮೂಗಿನ ದ್ರವವನ್ನು ಹಳದಿ ಸೂಕ್ಷ್ಮಾಣುಗೆ ತಗಲುವಂತೆ ಸೇರಿಸಿದ. ಕ್ಷಣಾರ್ಧದಲ್ಲಿ ಅವು ಕರಗಿ ಮಾಯವಾದವು. ರೋಗಾಣುಗಳಿಗೆ ಮಾರಕವಾಗುವ ವಸ್ತುಗಳು ಶರೀರದ ದ್ರವದಲ್ಲೇ ಇರಬಾರದೇಕೆಂಬ ಶಂಕೆ ಅಂದಿನಿಂದ ಅವನಲ್ಲಿ ಬೇರೂರಿತು.

ಫ್ಲೆಮಿಂಗ್ ಈ ದಿಸೆಯಲ್ಲಿ ಮುಂದುವರಿಸಿದ ಪ್ರಯೋಗಗಳಿಂದ,

ಅವನು ಶಂಕಿಸಿದ ವಸ್ತು ಲೈಸೋಜೈಮ್ (*Lysozyme*) ಎಂಬ ರಸಾಯನಿಕವಾಗಿತ್ತು. ಅದು ಸ್ವಾಭಾವಿಕವಾಗಿ ಸಿಂಬಳ, ಕಣ್ಣೀರು, ಜೊಲ್ಲು ರಸಗಳಲ್ಲಿದ್ದು, ಮೂಗು, ಕಣ್ಣು ಮತ್ತು ಬಾಯಿಯ ಮೂಲಕ ಸೇರುವ ಹಲವಾರು ರೋಗಾಣುಗಳಿಗೆ ಮಾರಕವಾಗುತ್ತಿರುವುದು ಕಂಡುಬಂದಿತು. ಆದರೆ ಯಾವುದಾದರೂ ರೋಗಕ್ಕೆ ಕಾರಣವಾದ ರೋಗಾಣುಗಳ ವಿರುದ್ಧ ಬಳಸಲು ಸಾಕಷ್ಟು ಲೈಸೋಜೈಮ್‌ನ ಉತ್ಪಾದನೆ ಅಸಾಧ್ಯದ ಮಾತು. ಆದರೂ ರೋಗಾಣುಗಳಿಗೆ ಮಾರಕವಾಗುವ ರಸಾಯನಿಕಗಳ ಉತ್ಪಾದನೆ ಸಾಧ್ಯವೆಂಬ ಅರಿವು ಅವನಿಗಾಯಿತು. ಈ ಸಂಶೋಧನೆಯ ವಿವರಗಳನ್ನು ಫ್ಲೆಮಿಂಗ್ ೧೯೨೨ರ ಸಮಕ್ಕೆ ವೈದ್ಯಕೀಯ ಪತ್ರಿಕೆಗಳಲ್ಲಿ ಪ್ರಕಟಿಸಿದ.

**ಅನಿರೀಕ್ಷಿತ ಘಟನೆ :**

ಮುಂದಿನ ಕೆಲವು ವರ್ಷಗಳು ಫ್ಲೆಮಿಂಗ್‌ನ ಪ್ರಯೋಗಾಲಯದಲ್ಲಿ ನಿತ್ಯಗಟ್ಟಲೆಯ ಕೆಲಸಗಳು ಸಾಗುತ್ತಿದ್ದರೂ, ವಿಶೇಷ ತರಹದ ಪರಿಣಾಮ ಬೀರಬಹುದಾದ ಫಲಿತಾಂಶಗಳಾವುದೂ ಹೊರಬರಲಿಲ್ಲ.

೧೯೨೮ರ ಒಂದು ಮಧ್ಯಾಹ್ನ ಫ್ಲೆಮಿಂಗ್ ಪ್ರಯೋಗಾಲಯಕ್ಕೆ ಬಂದಾಗ ತುಂಬಾ ಸೆಕೆಯ ವಾತಾವರಣ. ಸೂಕ್ಷ್ಮದರ್ಶಕದೆದುರು ವೀಕ್ಷಣೆಗೆ ಕುಳಿತಾಗ ಸೆಕೆ ತಾಳಲಾರದೆ ಎದುರಿನ ಕಿಟಕಿ ಬಾಗಿಲನ್ನು ತೆರೆಯಬೇಕಾಯಿತು. ರೋಗಾಣುಗಳನ್ನು ಪ್ರಯೋಗಕ್ಕಾಗಿ "ಬೆಳಸಲು" (*Culture*) ಹಿಂದಿನ ವಾರ ಇರಿಸಿದ ಗಾಜಿನ ತಟ್ಟೆಗಳ (*Petri Dishes*) ವೀಕ್ಷಣೆ ಆ ದಿನದ ಕೆಲಸ. ತಟ್ಟೆಯೊಂದರ ಮುಚ್ಚಳ ತೆಗೆದು ವೀಕ್ಷಿಸಿದ ನಂತರ ತಕ್ಷಣ ಮುಚ್ಚಿಡುವುದು ಸ್ವಲ್ಪ ತಡವಾಯಿತು, ಅಷ್ಟರಲ್ಲೇ ಗಾಳಿಯಲ್ಲಿ ತೇಲಿಬಂದ ಬೂಸಲಿನ ಕಣ (*Mould*) ವೊಂದು ತಟ್ಟೆಯಲ್ಲಿ ಬಿತ್ತು. ಅದನ್ನು ಗಮನಿಸಿದರೂ ಬಹುಶಃ ಯಾವುದೋ ಯೋಚನೆಯಲ್ಲಿ ಮಗ್ನನಾಗಿದ್ದ ಫ್ಲೆಮಿಂಗ್ ನಿಯಮಕ್ಕೆ ವಿರುದ್ಧವಾಗಿ ತ್ಯಜಿಸಲಿಲ್ಲ. ಅದನ್ನು ಮತ್ತೆ ಮುಂದಿನ ವಾರದ ವೀಕ್ಷಣೆಗಾಗಿ ಇರಿಸಿದ.

ಮುಂದಿನವಾರ ಆ ತಟ್ಟೆಯನ್ನು ಮತ್ತೆ ವೀಕ್ಷಿಸಿದಾಗ ಬೂಸಲು ಕಣ ಬಿದ್ದ ಜಾಗದಲ್ಲಿ ಅದು ಹತ್ತಿಯಂತೆ ಸೊಂಪಾಗಿ ಬೆಳೆದಿತ್ತು. ನಿಯಮದಂತೆ

ಬೂಸಲು ಮಿಶ್ರವಾಗಿರುವ ತಟ್ಟೆಯನ್ನು ಮುಂದಿನ ಪ್ರಯೋಗಕ್ಕೆ ಸೇರಿಸದೆ ತ್ಯಜಿಸುವುದು ವಾಡಿಕೆ. ಅದನ್ನಿನ್ನೇನು ಕೆಳಗಿನ ಬಕೆಟ್ಟಿನಲ್ಲಿ ಬಿಸಾಡಲು ಕೈ ಗೆತ್ತಿಕೊಂಡ ಫ್ಲೆಮಿಂಗ್ ಮಾನವ ಜನಾಂಗದ ಭವಿಷ್ಯತ್ತಿನ ಒಲವೋ ಎಂಬಂತೆ ಮತ್ತೆ ಪ್ರಯೋಗಕ್ಕಿಡಲು ನಿರ್ಧರಿಸಿ ಕೆಳಗೆ ಹಾಕಲಿಲ್ಲ. ಮತ್ತೊಮ್ಮೆ ಆ ಬೂಸಲಿನತ್ತ ತನ್ನ ದೃಷ್ಟಿ ಹಾಯಿಸಿದ. ನಿರೀಕ್ಷಿಸಿದಂತೆ ತಟ್ಟೆಯಲ್ಲಿ ಸ್ಟೈಫೈಲೋ ಕಾಕೈ ರೋಗಾಣುಗಳು ಹುಲುಸಾಗಿ ಬೆಳೆದಿದ್ದರೂ, ಬೂಸಲು ಬೆಳೆದಿದ್ದ ಜಾಗದ ಸುತ್ತ ವರ್ತುಲಾಕಾರದ ವಲಯದಲ್ಲಿ ಅವುಗಳು ನಾಪತ್ತೆ!

ಅದೊಂದು ಕುತೂಹಲಕಾರಿಯಾದ ದೃಶ್ಯ. ಫ್ಲೆಮಿಂಗ್ ಮತ್ತೆ ಮತ್ತೆ ಅತ್ತ ವೀಕ್ಷಿಸಿದ. ಬೂಸಲಿನ ಸುತ್ತ ಅವು ಬೆಳೆಯದಿರಲು ಪ್ರಬಲ ಕಾರಣವಿರಬೇಕೆಂದು ಅವನ ಅನಿಸಿಕೆ. ಸ್ಟೈಫೈಲೋ ಕಾಕೈಗಳಿಗೆ ಮಾರಕ ವಾಗಬಹುದಾದ ವಸ್ತು ಯಾವುದಾದರು ಉತ್ಪತ್ತಿಯಾಗಿರಬಹುದೆಂಬ ಸಂಶಯ ಮೂಡಿತು. ಕೆಲವು ವರ್ಷಗಳ ಹಿಂದೆ ಲೈಸೋಜೈಮ್ ಕಂಡು ಹಿಡಿದಾಗಿನ ಅನುಭವ ಮತ್ತೆ ಮರುಕಳಿಸಿತು ಫ್ಲೆಮಿಂಗ್‌ನ ಸ್ಮೃತಿ ಪಟಲದಲ್ಲಿ.

ಸದಾ ಸಂಶೋಧನಾಸಕ್ತಿಯ ಫ್ಲೆಮಿಂಗ್‌ನ ಚುರುಕು ಬುದ್ಧಿ ಅಷ್ಟಕ್ಕೆ ನಿಲ್ಲಲಿಲ್ಲ. ಮೊದಲು ''ಆಕಸ್ಮಿಕ'' ವಾಗಿ ಬೆಳೆಸಿದ್ದ ಬೂಸಲನ್ನು ಈಗ ಉದ್ದೇಶಪೂರಿತವಾಗಿ ಇನ್ನೂ ಕೆಲವು ತಟ್ಟೆಗಳಲ್ಲಿ ನಾಟೀ ಹಾಕಿ ಬೆಳೆಸಲಿಟ್ಟ. ಮುಂದೆ ವೀಕ್ಷಿಸಿದಾಗ ಮತ್ತೆ ಅದೇ ಫಲಿತಾಂಶ. ಮೊದಲಿನ ಆಕಸ್ಮಿಕ ಈಗ ಸತ್ಯ ಸಂಗತಿ. ಸ್ಟೈಫೈಲೋ ಕಾಕೈಗಳೇ ಅಲ್ಲದೆ ಇತರ ಸೂಕ್ಷ್ಮಾಣುಗಳಿರುವ ತಟ್ಟೆಗಳಲ್ಲೂ ಬೂಸಲು ಬೆಳೆಯನ್ನು ಬಿತ್ತಿ ಮೊದಲಿನ ಫಲಿತಾಂಶಗಳನ್ನು ಇನ್ನೂ ಖಚಿತ ಪಡಿಸಿದ. ಬೂಸಲನ್ನು ದ್ರವ ಆಹಾರ ಮಿಶ್ರಣ (*Broth*) ಗಳಲ್ಲಿ ಬೆಳೆಸಿ, ಅದರ ಸಾರವನ್ನು ಸೂಕ್ಷ್ಮಾಣುಗಳಿಗೆ ಸೋಂಕಿಸಿದಾಗ ಅವು ನಾಶವಾಗುತ್ತಿದ್ದುದನ್ನೂ ಪ್ರದರ್ಶಿಸಿದ. ಫ್ಲೆಮಿಂಗ್‌ನ ಯೋಜನಾ ಲಹರಿ ಮುಂದೆ ಪ್ರವಹಿಸತೊಡಗಿತು.

ಫ್ಲೆಮಿಂಗ್ ತನ್ನ ಹೊಸ ಶೋಧನೆಯನ್ನು ಮನುಷ್ಯ ಮತ್ತು ಇತರ ಜೀವಿಗಳನ್ನು ಬಾಧಿಸುವ ರೋಗಾಣುಗಳ ವಿರುದ್ಧ ಬಳಸುವ ಸಾಧ್ಯತೆಯ ಸಲುವಾಗಿ ಇನ್ನೂ ಕೆಲವು ಪ್ರಯೋಗಗಳನ್ನು ಮುಂದುವರಿಸಿದ. ಮನು

ಪ್ಯನ ಬಿಳೀ ರಕ್ತ ಕಣಗಳ ಜೊತೆ ಬೂಸಲಿನ ರಸವನ್ನು ಬೆರಸಿದಾಗ ಅವು ಗಳಲ್ಲಿ ಯಾವ ದುಷ್ಪರಿಣಾಮ ಕಾಣಲಿಲ್ಲ. ಪ್ರಯೋಗಾಲಯದ ಇಲಿಗಳಿಗೆ ಬೂಸಲಿನ ರಸವನ್ನು ಚುಚ್ಚುಮದ್ದಾಗಿ ಉಪಯೋಗಿಸಿದಾಗಲೂ ಕೆಡುಕಾ ಗಲಿಲ್ಲ. ರೋಗಿಗಳ ಹುಣ್ಣುಗಳ ಮೇಲೆ ಈ ರಸವನ್ನು ಲೇಪಿಸಿದಾಗ ಅವು ಗುಣವಾಗುವ ಚಿಹ್ನೆಗಳು ಕಾಣಬರುತ್ತಿದ್ದವು. ಆದರೆ ಪೂರ್ತಿ ಗುಣವಾಗು ವಷ್ಟು ಕಾಲ ಹಚ್ಚಲು ಬೇಕಾಗುವಷ್ಟು ರಸ ತಯಾರಿಕೆ ಕಷ್ಟ ಸಾಧ್ಯ ವಾಗಿತ್ತು. ಬೂಸಲಿನ ರಸ ಸ್ವಲ್ಪ ಕಾಲದಲ್ಲೇ ಗುಣಮಟ್ಟವನ್ನು ಕಳೆದು ಕೊಳ್ಳುತ್ತಿದ್ದುದರಿಂದ ಹೆಚ್ಚು ಕಾಲ ಶೇಖರಿಸಿಡುವಂತಿರಲಿಲ್ಲ.

ಫ್ಲೆಮಿಂಗ್ ಮತ್ತು ಸಹೋದ್ಯೋಗಿಗಳು ಅಲ್ಲಿಯವರೆಗೆ ಉಪಯೋ ಗಿಸುತ್ತಿದ್ದ ಬೂಸಲು ಪೆನಿಸಿಲಿಯಂ ನೋಟೇಟಮ್ (*Penicillium Nmotatu*) ಎಂಬುದನ್ನು ಗುರುತಿಸಿದರು. ಪೆನ್ಸಿಲ್‌ನಂತೆ ಚೂಪಾಗಿ ಬೆಳೆಯುತ್ತಿದ್ದುದರಿಂದ ಆ ಹೆಸರು ಅನ್ವರ್ಥನಾಮವಾಗಿತ್ತು. ಆದರಿಂದ ಉತ್ಪತ್ತಿಯಾಗುತ್ತಿದ್ದ ರಸಕ್ಕೆ ಪೆನಿಸಿಲಿನ್ (*Penicillin*) ಎಂದು ನಾಮ ಕರಣ ಮಾಡಿದರು. ದ್ರವರೂಪದಲ್ಲಿ ಸ್ವಲ್ಪ ಸಮಯದಲ್ಲೇ ಸತ್ವವನ್ನು ಕಳೆದುಕೊಳ್ಳುತ್ತಿದ್ದ ಆ ಕಾಲದ ಪೆನಿಸಿಲಿನ್‌ನನ್ನು ಘನ ರೂಪಕ್ಕೆ ತರುವ ಪ್ರಯತ್ನದಲ್ಲಿ ಅವರು ಯಶಸ್ವಿಯಾಗದಿದ್ದುದು ದುರದೃಷ್ಟಕರ. ಅವರ ಪ್ರಯೋಗಾಲಯ ಅಂತಹ ಕಾರ್ಯಕ್ಕೆ ಸಜ್ಜಾಗಿರಲಿಲ್ಲ. ಅವರ ತಂಡದಲ್ಲಿ ರಸಾಯನ ಶಾಸ್ತ್ರತಜ್ಞರೂ ಇರಲಿಲ್ಲ. ಸಣ್ಣದೊಂದು ಪ್ರಯೋಗಕ್ಕೆ ಬೇಕಾ ಗುವಷ್ಟು ಪೆನಿಸಿಲಿನ್ ತಯಾರಿಕೆಗೆ ವಿಪರೀತ ಖರ್ಚು ತಗಲುತ್ತಿತ್ತು. ಆದರ ಮುಂದುವರಿದ ಪ್ರಯೋಗ "ಬಿಳಿಯಾನೆ" ಯಾಗುತ್ತದೆಂದು ಸಹೋದ್ಯೋಗಿಗಳು ಎಚ್ಚರಿಸಿ ಕೈ ಬಿಡುವಂತೆ ಮಾಡಿದರು. ಫ್ಲೆಮಿಂಗ್ ಈ ಸಂಶೋಧನೆಯ ಬಗೆಗೂ ವಿವರವಾದ ಲೇಖನವನ್ನು ಬರೆದು ಲಾನ್ಸೆಟ್ (*Lancet*) ಪತ್ರಿಕೆಯಲ್ಲಿ ಪ್ರಕಟಿಸಿದ (೧೯೨೯), ಮಾನವನ ಪೀಡಿಸುವ ರೋಗಾಣುಗಳಿಗೆ ಅದು ಮಾರಕವಾಗಬಹುದೆಂಬ ಭವಿಷ್ಯವಾಣಿ ಆದರ ಲ್ಲಿತ್ತು. ಆದನ್ನು ಓದಿದ ಕೆಲವರು ಆಸಕ್ತಿಯಿಂದ ಬೂಸಲಿನ ಮಾದರಿ ಯನ್ನು ಅವನಿಂದಲೇ ತರಿಸಿಕೊಂಡಿದ್ದರು.

**ಅರ್ನೆಸ್ಟ್‌ಚೈನ್ :**

ಬರ್ಲಿನ್ ನಗರದಲ್ಲಿ ಜನ್ಮ ತಾಳಿದ (೧೯೦೭) ಅರ್ನೆಸ್ಟ್‌ಚೈನ್ (*Ernst Boris Chain*) ಯಹೂದಿ. ಪೂರ್ವಜರು ರಷ್ಯಾದಿಂದ ವಲಸೆ ಬಂದವರು. ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ರಸಾಯನಶಾಸ್ತ್ರ ಮತ್ತು ಜೀವನಶಾಸ್ತ್ರ (*Chemistry, Physiology*) ಗಳನ್ನು ಅಭ್ಯಸಿಸಿ ಡಾಕ್ಟರೇಟ್ ಗಳಿಸಿದ್ದ. ಮುಂದೆ ಬರ್ಲಿನ್ ಆಸ್ಪತ್ರೆಯಲ್ಲಿ ರೋಗ ವಿಜ್ಞಾನ ಶಾಸ್ತ್ರ (*Pathology*)ದಲ್ಲಿ ಸಂಶೋಧನಾ ಕಾರ್ಯ. ಚುರುಕು ಬುದ್ಧಿ ಮತ್ತು ಕಾರ್ಯದಕ್ಷತೆಗೆ ಹೆಸರಾಗಿದ್ದ ಡಾ. ಚೈನ್‌ಗೆ ಒಳ್ಳೆಯ ಭವಿಷ್ಯ ಕಾದಿತ್ತು.

ಆದರೆ ಹಿಟ್ಲರ್‌ನ ಸರ್ವಾಧಿಕಾರಿ ಸರ್ಕಾರ ಯಹೂದ್ಯ ಜನಾಂಗದ ನಿರ್ಮೂಲನೆಗೆ ಪಣತೊಟ್ಟು ಅವರಿಗೆ ವಿಚಿತ್ರ ಹಿಂಸೆ ಕೊಡಲಾರಂಭಿಸಿತು ಜೀವದಾಸೆಯಿಂದ ಯಹೂದ್ಯರು ವಿವಿಧ ದೇಶಗಳಿಗೆ ನಿರಾಶ್ರಿತರಾಗಿ ಓಡ ಬೇಕಾಯಿತು. ಚೈನ್ ಇಂಗ್ಲೆಂಡ್ ಸೇರಿದ.

ಚೈನ್ ಇಂಗ್ಲೆಂಡ್ ತಲುಪಿದಾಗ (೧೯೩೩) ಇಪ್ಪತ್ತಾರು ವರ್ಷ. ಕೈ ಚೀಲದಲ್ಲಿದ್ದ ಸಾಮಾನುಗಳಲ್ಲದೇ ಬೇರೇನೂ ಅವನಲ್ಲಿರಲಿಲ್ಲ. ಜರ್ಮನ್ ಭಾಷೆಯಲ್ಲದೆ ಬೇರೆ ಗೊತ್ತಿಲ್ಲ. ವಿಜ್ಞಾನದ ವಿಷಯಗಳಲ್ಲದೇ ಪಿಯಾನೋ ನುಡಿಸುವುದರಲ್ಲಿ ಪ್ರಾವೀಣ್ಯತೆ ಇರುವುದೊಂದೇ ಆಶಾಕಿರಣ. ಇಂಗ್ಲಿಷ್ ಬಾರದ ಚೈನ್‌ಗೆ ಇಂಗ್ಲೆಂಡ್‌ನಲ್ಲಿ ವೈಜ್ಞಾನಿಕ ಕೆಲಸ ದೊರೆಯಲಾರದೆಂದು ಕೆನಡಾಕ್ಕೆ ಪ್ರಯಾಣ ಮಾಡಿ ಪಿಯಾನೋ ನುಡಿಸುವುದರಿಂದ ಜೀವನ ರಥ ಸಾಗಿಸುವ ಯೋಚನೆ ಮಾಡಿದ್ದ.

ನಿರಾಶ್ರಿತರ ಪುನರ್ವಸತಿಗಾಗಿ ನೇಮಕಗೊಂಡ ಸಮಿತಿ ಜರ್ಮನಿ ಯಿಂದ ವಲಸೆ ಬಂದಿದ್ದವರ ವಿದ್ಯಾರ್ಹತೆ ಮತ್ತು ಇತರ ಸಾಧನೆಗಳ ಬಗೆಗೆ ಮಾಹಿತಿ ಪಡೆದಾಗ ಚೈನ್‌ನ ಯೋಗ್ಯತೆಯು ಅರಿವಾಗಿರಬೇಕು. ಅವನು ಇಂಗ್ಲೆಂಡ್‌ನಲ್ಲೇ ನೆಲಸುವಂತೆ ಒತ್ತಾಯಿಸಿತು. ಕೇಂಬ್ರಿಡ್ಜ್ ವಿಶ್ವವಿದ್ಯಾ ಲಯಕ್ಕೆ ಪ್ರತಿಭಾವಂತ ರಸಾಯನಶಾಸ್ತ್ರ ಪರಿಣತನ ಆವಶ್ಯಕತೆಯಿದ್ದು ಅಲ್ಲಿ ಅವನಿಗೆ ಕೆಲಸ ಕೊಡಿಸಿದರು. ಚೈನ್ ಅತ್ಯಲ್ಪ ಸಮಯದಲ್ಲೇ ಇಂಗ್ಲಿಷ್ ಕಲಿತನಲ್ಲದೆ, ಇನ್ನೂ ಒಂದು ಡಾಕ್ಟರೇಟ್ ಗಿಟ್ಟಿಸಿಕೊಂಡ!

## ಹೋವಾರ್ಡ್ ಫ್ಲೋರೆ :

ಆಸ್ಟ್ರೇಲಿಯಾದ ಅಡಿಲೈಡ್‌ನ ಪಾದರಕ್ಷೆ ವ್ಯಾಪಾರಿಯೊಬ್ಬನ ಮಗ ಹೋವಾರ್ಡ್ ಫ್ಲೋರೆಯ ಜನನ ೧೮೯೮ರಲ್ಲಿ. ಅವನೊಬ್ಬ ಪ್ರತಿಭಾವಂತ ವಿದ್ಯಾರ್ಥಿ. ವೈದ್ಯಕೀಯ ಪದವಿಯ ಜೊತೆಗೆ ಹಲವಾರು ಪ್ರಶಸ್ತಿಗಳ ಗಳಿಕೆ; ಪ್ರತಿಷ್ಠಿತ ರೋಡ್ಸ್ ವಿದ್ಯಾರ್ಥಿ ವೇತನದ (*Rhodes Scholarship*) ನೆರವಿನಿಂದ ಇಂಗ್ಲೆಂಡ್‌ಗೆ ಪ್ರಯಾಣ (೧೯೨೨). ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಜೀವನಶಾಸ್ತ್ರ ಮತ್ತು ರೋಗ ವಿಜ್ಞಾನ ಶಾಸ್ತ್ರ ಗಳೆರಡರಲ್ಲೂ ಅಭ್ಯಾಸ. ಅಲ್ಲೂ ತೋರಿಸಿದ ಪ್ರಾವೀಣ್ಯತೆ ಮತ್ತು ಪ್ರತಿಭೆ ಯಿಂದ ಅಮೆರಿಕಾದ ರಾಕ್‌ಫೆಲರ್ ಫೆಲೋಷಿಪ್ ನೀಡಿಕೆ. ಒಂದು ವರ್ಷ ಅಮೇರಿಕಾದ ಪ್ರತಿಷ್ಠಿತ ವೈದ್ಯಕೀಯ ಸಂಸ್ಥೆಗಳಲ್ಲಿ ತಿರುಗಾಟ. ಸತತ ಅಭ್ಯಾಸದ ಅನುಭವದಿಂದ ಮತ್ತೆ ಇಂಗ್ಲೆಂಡಿಗೆ ವಾಪಸ್ಸು.

ಅಮೆರಿಕಾದಿಂದ ಹಿಂದಿರುಗಿದ ನಂತರ ಲಂಡನ್ ಆಸ್ಪತ್ರೆಯ ಕೆಲಸ ಕಾದಿತ್ತು. ಹಲವಾರು ಪರಿಣಾಮಕಾರಿ ಪ್ರಯೋಗಗಳನ್ನು ನಡೆಸಿ ಸ್ವಲ್ಪ ಸಮಯದಲ್ಲೇ ಕೀರ್ತಿ ಗೌರವಗಳ ಸಂಪಾದನೆ. ಮುಂದೆ ಷಫೀಲ್ಡ್ ವಿಶ್ವ ವಿದ್ಯಾನಿಲಯದ ರೋಗ ವಿಜ್ಞಾನ ಶಾಸ್ತ್ರದ ಪ್ರಾಧ್ಯಾಪಕತೆಗೆ ಆಹ್ವಾನ (೧೯೩೧). ಅಲ್ಲಿ ಕೆಲಕಾಲವಿದ್ದು ಮತ್ತೆ ಆಕ್ಸ್‌ಫರ್ಡ್ ವಿಶ್ವವಿದ್ಯಾ ನಿಲಯದ ರೋಗ ವಿಜ್ಞಾನ ಶಾಸ್ತ್ರದ ಪೀಠವನ್ನಲಂಕರಿಸಲು ಫ್ಲೋರೆಗೆ ಆಹ್ವಾನ.

## ಫ್ಲೋರೆ–ಚೈನ್ ಸಮಾಗಮ :

ಆಕ್ಸ್‌ಫರ್ಡ್‌ಗೆ ಫ್ಲೋರೆ ಆಗಮಿಸಿದ ನಂತರ ಅಲ್ಲಿನ ಪ್ರಯೋಗಾ ಲಯಗಳಿಗೆ ಹೊಸ ಹುರುಪು, ಹೊಸ ಹೊಸ ಪ್ರಯೋಗ–ಸಂಶೋಧನೆಗಳ ಆರಂಭ. ರಸಾಯನಶಾಸ್ತ್ರ ವಿಭಾಗದ ಮೇಲ್ವಿಚಾರಣೆಗೆ ಪ್ರತಿಭಾವಂತ ವಿಜ್ಞಾನಿಯ ಆವಶ್ಯಕತೆಯಿದ್ದು, ಅಂತಹವನೊಬ್ಬನನ್ನು ಆರಿಸಲು ಫ್ಲೋರೆ ಇತರ ಕೇಂದ್ರಗಳಿಗೆ ಪ್ರಯಾಣ ಹೊರಟ. ಕೇಂಬ್ರಿಡ್ಜ್‌ಗೆ ಬಂದಾಗ ಅರ್ನೆಸ್ಟ್ ಚೈನ್‌ನೊಡನೆ ಸಮಾಗಮ. ಪ್ರಚಲಿತ ವೈಜ್ಞಾನಿಕ ವಿಷಯಗಳ ಬಗೆಗೆ ಇಬ್ಬರೂ ಕಲೆತು ಒಂದೆರಡು ದಿನ ಚರ್ಚಿಸಿದರು. ಚೈನ್‌ನ ಜ್ಞಾನ

ಭಂಡಾರ ಫ್ಲೋರೆಯು ತಲೆದೂಗಿಸಿತು. ಆಕ್ಸ್‌ಫರ್ಡ್‌ನ ಕೆಲಸಕ್ಕೆ ಸರಿಯಾದ ವಿಜ್ಞಾನಿಯೆಂದು ಗುರುತಿಸಿ ಅಲ್ಲಿಗೆ ಬರುವಂತೆ ಪುಸಲಾಯಿಸಿ ಯಶಸ್ವಿಯಾದ.

ಆಕ್ಸ್‌ಫರ್ಡ್ ಪ್ರಯೋಗಾಲಯದಲ್ಲಿ ಫ್ಲೋರೆ ಮತ್ತು ಚೈನ್ ಕೇವಲ ಸಹೋದ್ಯೋಗಿಗಳಾಗಿರಲಿಲ್ಲ. ಆತ್ಮೀಯ ಗೆಳೆಯರಾದರು. ಅಲ್ಲಿ ಮುಂದು ವರಿಯುತ್ತಿದ್ದ ಎಲ್ಲಾ ಪ್ರಯೋಗಗಳ ಬಗೆಗೂ ಇಬ್ಬರೂ ಚರ್ಚಿಸಿ ಪರಿಹಾರ ಕಂಡುಹಿಡಿಯುತ್ತಿದ್ದರು. ರೋಗ ವಿಜ್ಞಾನ ಮತ್ತು ರಸಾಯನಶಾಸ್ತ್ರಗಳೆ ರಡರಲ್ಲಿ ಪರಿಣಿತರಾದ ಅವರಿಬ್ಬರೂ ಆ ವಿಭಾಗಗಳಲ್ಲಿ ಪ್ರಗತಿಯಲ್ಲಿದ್ದ ವಿಷಯಗಳ ಬಗೆಗೆ ಬಹಳ ಆಸಕ್ತಿ ಹೊಂದಿದ್ದರು. ಆಗ ತಾನೆ ಬೆಳಕಿಗೆ ಬಂದಿದ್ದ ಸಲ್‌ಫೋನಮೈಡ್ ರಸಾಯನಿಕ ಮದ್ದುಗಳ ಯಶಸ್ಸು ಮತ್ತು ವಿಫಲತೆ ಹಲವು ಸಾರಿ ಅವರ ಚರ್ಚೆಯ ವಿಷಯ. ಕೆಲವು ರೋಗಾಣುಗಳ ವಿರುದ್ಧ ಅವು ಪರಿಣಾಮಕಾರಿ ಫಲಿತಾಂಶ ನೀಡುತ್ತಿದ್ದರೂ ರೋಗಿಯ ಮೂತ್ರಜನಕಾಂಗಗಳಲ್ಲಿ ತೀವ್ರ ರೀತಿಯ ತೊಡಕುಗಳನ್ನುಂಟು ಮಾಡು ತ್ತಿದ್ದವು. ಇದರಿಂದ ಅವುಗಳನ್ನು ವ್ಯಾಪಕವಾಗಿ ಬಳಸುವಂತಿರಲಿಲ್ಲ. ಇದಕ್ಕಿಂತ ಉತ್ತಮಮಟ್ಟದ ಮದ್ದುಗಳ ಶೋಧನೆಯ ಆವಶ್ಯಕತೆಯಿದೆ ಎಂಬುದರಲ್ಲಿ ಅವರಿಬ್ಬರಲ್ಲಿ ಏಕಾಭಿಪ್ರಾಯ ಮೂಡಿತ್ತು.

ರೋಗಾಣುಗಳ ವಿರುದ್ಧ ಸಲ್‌ಫೋನಾಮೈಡ್‌ಗಳಿಗಿಂತ ಪರಿಣಾಮ ಕಾರಿ ಹಾಗೂ ರೋಗಿಗೆ ಅಪಾಯವಾಗದಂತಹ ಮದ್ದುಗಳನ್ನು ಕಂಡು ಹಿಡಿಯುವ ಹಂಬಲ ಚೈನ್‌ನಲ್ಲಿ ದಿನದಿನಕ್ಕೆ ಹೆಚ್ಚಾಯಿತು. ಹೊಸದೊಂದು ಸಂಶೋಧನೆ ಪ್ರಾರಂಭಿಸಲು ತಗುಲುವ ಖರ್ಚಿನ ಜವಾಬ್ದಾರಿಯ ಅರಿವೂ ಅವನಿಗಿರದಿರಲಿಲ್ಲ. ಈ ದಿಸೆಯಲ್ಲಿ ಹಿಂದೆ ಯಾರಿಂದಲಾದರೂ ಪ್ರಯೋಗ ಗಳು ನಡೆದಿರಬಹುದೆಂಬ ಅನುಮಾನವೂ ಇತ್ತು. ಅದರಿಂದ ಇನ್ನೊಬ್ಬ ಸಹೋದ್ಯೋಗಿಯೊಬ್ಬನನ್ನು ಸೇರಿಸಿಕೊಂಡು ಆಕ್ಸ್‌ಫರ್ಡ್‌ನ ರಾಡ್‌ಕ್ಲಿಫ್ ಪುಸ್ತಕ ಭಂಡಾರದಲ್ಲಿದ್ದ ಹಳೆಯ ವೈದ್ಯಕೀಯ ನಿಯತಕಾಲಿಕ ಪತ್ರಿಕೆಗಳ ಲೇಖನಗಳನ್ನು ಅಭ್ಯಸಿಸುವ ಯೋಜನೆ ತಯಾರಾಯಿತು. ಫ್ಲೆಮಿಂಗ್ ಲೈಸೋಜೈಮ್ ಬಗೆಗೆ ೧೯೨೨ರಲ್ಲಿ ಬರೆದ ಲೇಖನವನ್ನು ಅವಲೋಕಿಸಿ, ಮೂಲ ಲೇಖಕನ ಅಭಿಪ್ರಾಯದಂತೆ ಅದರ ಮುಂದುವರಿದ ಶೋಧನೆ ಫಲ ಪ್ರದವಾಗಲಾರದೆಂಬ ಅಭಿಪ್ರಾಯಕ್ಕೆ ಬಂದರು. ಮುಂದೆ ಫ್ಲೆಮಿಂಗ್

೧೯೨೯ರಲ್ಲಿ ಲಾನ್ಸೆಟ್‌ನಲ್ಲಿ ಪೆನಿಸಿಲಿನ್ ಬಗೆಗೆ ಬರೆದ ಲೇಖನವು ಅವರ ಗಮನ ಸೆಳೆಯಿತು. ಫ್ಲೆಮಿಂಗ್ ಲೇಖನ ಬರೆದ ಸುಮಾರು ಒಂದು ದಶಕ ದಲ್ಲಿ (೧೯೩೮) ಅದು ಮತ್ತೆ ಬೆಳಕಿಗೆ ಬಂದು ಹೊಸ ಅಧ್ಯಾಯಕ್ಕೆ ನಾಂದಿಯಾಯಿತು.

ಚೈನ್‌ನ "ಹೊಸ ಸಂಶೋಧನೆ" ಫ್ಲೋರೆಯ ಗಮನಕ್ಕೂ ಬಂದು ಆ ಲೇಖನವನ್ನು ಅವನೂ ಅಭ್ಯಸಿಸಿದನು. ಮೇಲ್ನೋಟಕ್ಕೆ ಅದರಲ್ಲಿ ಹೆಚ್ಚಿನ ತಿರುಳಿರಲಾರದೆಂಬುದು ಫ್ಲೋರೆಯ ಅಭಿಪ್ರಾಯ. ಆದರೆ ಪೆನಿಸಿಲಿನ್ ಬಗೆಗೆ ಚೈನ್‌ಗೆ ಸಂಪೂರ್ಣ ನಂಬಿಕೆ, ಈ ಬಗ್ಗೆ ದೀರ್ಘ ಚರ್ಚೆ. ಆಕ್ಸ್‌ಫರ್ಡ್‌ನ ರಮಣೀಯ ಉದ್ಯಾನವನದ ಪುರದಡಿ ರಾತ್ರಿಯೆಲ್ಲಾ ಚರ್ಚಿಸಿ, ಚೈನ್‌ನ ವಿಚಾರಸರಣಿಗೆ ಮನಸೋತ ಫ್ಲೋರೆ ಪೆನಿಸಿಲಿನ್‌ನ ಮುಂದುವರಿದ ಸಂಶೋಧನೆಗೆ ಒಪ್ಪಬೇಕಾಯಿತು.

ಪೆನಿಸಿಲಿನ್‌ನ ಮುಂದುವರಿದ ಸಂಶೋಧನೆಗೆ ಚೈನ್ ಮರುದಿನದಿಂದಲೇ ಕಾರ್ಯಪ್ರವರ್ತನಾದ. ಆ ಬೂಸಲಿನ ಮಾದರಿಯನ್ನು ದೊರಕಿಸಿಕೊಳ್ಳು ವುದು ಮೊದಲ ಕೆಲಸ. ಆ ಬಗ್ಗೆ ತಲೆಕೆರೆದುಕೊಳ್ಳುತ್ತಿದ್ದ ಚೈನ್‌ಗೆ ಅದು ಪ್ರಯೋಗಾಲಯದ ಮೂಲೆಯೊಂದರಲ್ಲಿ ಬೆಳೆದುಕೊಂಡಿರುವುದನ್ನು ಸಹಾ ಯಕರೊಬ್ಬರು ತೋರಿಸಿಕೊಟ್ಟರು. ಅಲೆಗ್ಸಾಂಡರ್ ಫ್ಲೆಮಿಂಗ್‌ನ ೧೯೨೯ ರ ಲೇಖನವನ್ನು ಅಭ್ಯಸಿಸಿದ ಪ್ರಯೋಗಾಲಯದ ನಿರ್ದೇಶಕರು ಕುತೂ ಹಲದಿಂದ ಫ್ಲೆಮಿಂಗ್‌ನ ಪ್ರಯೋಗಾಲಯದಿಂದ ತರಿಸಿಕೊಂಡಿದ್ದ ಬೂಸಲು ಮಾದರಿಯಿಂದಲೇ ಬೆಳೆದುಕೊಂಡಿದ್ದಾಗಿತ್ತು ಅದು!. ಪೆನಿಸಿಲಿಯಂ ನೋಟೇಟಮ್ ಮತ್ತೊಮ್ಮೆ ಆಕಸ್ಮಿಕವಾಗಿ ವಿಜ್ಞಾನಿಗಳ ಗಮನ ಸೆಳೆ ಯಿತು. ಚೈನ್‌ನ ಕೆಲಸ ಸುಗಮವಾಯಿತು.

ಫ್ಲೋರೆ ಮತ್ತು ಚೈನ್ ೧೯೩೯ರ ಸೆಪ್ಟಂಬರ್‌ನಲ್ಲಿ ಪೆನಿಸಿಲಿನ್ ಮುಂದುವರಿದ ಪ್ರಯೋಗಗಳನ್ನು ಆರಂಭಿಸುತ್ತಿರುವಾಗಲೇ ಜರ್ಮನಿಯ ಸರ್ವಾಧಿಕಾರಿ ಅಡೋಲ್ಫ್ ಹಿಟ್ಲರ್ ಪೋಲೆಂಡ್‌ನೊಳಗೆ ತನ್ನ ಸೈನ್ಯ ನುಗ್ಗಿಸುವ ಮೂಲಕ ಎರಡನೆ ಮಹಾಯುದ್ಧಕ್ಕೆ ನಾಂದಿ ಹಾಡಿದ. ಯುದ್ಧದ ಪರಿಣಾಮಗಳಿಂದ ಜನಜೀವನ ಏರುಪೇರಾಗುವುದರ ಬಗೆಗೆ ಪ್ರಪಂಚಾದ್ಯಂತ ನಾಗರಿಕರು ಯೋಚನಾಕ್ರಾಂತರಾದರೆ, ಆಕ್ಸ್‌ಫರ್ಡ್‌ನ

ವಿಜ್ಞಾನಿಗಳಿಗೆ ಯುದ್ಧದಲ್ಲಿ ಗಾಯಗೊಳ್ಳುವವರ ನರಳಾಟ, ಗಾಯಗಳಲ್ಲಿ ಕೀವಾಗುವುದನ್ನು ತಡೆಗಟ್ಟಲು ಸರಿಯಾದ ಮದ್ದುಗಳಿರದ ಸಂಕಟ. ಪೆನಿಸಿಲಿನ್ ಆ ದಿಸೆಯಲ್ಲಿ ಸಹಾಯಕವಾಗಬಹುದೆಂಬ ಆಶಾಭಾವನೆಗೆ ಮತ್ತಷ್ಟು ಹುರುಪು, ಸಂಶೋಧನೆ ಆತಂಕ. ಪೆನಿಸಿಲಿನ್ ಸಂಶೋಧನೆ ಮತ್ತೊಂದು "ಪಾಂಡಿತ್ಯ ಪ್ರದರ್ಶನ" ವಾಗಬಹುದೆಂದು ಶಂಕಿಸಿದವರೂ ಸಹಾ ಉತ್ಸಾಹದಿಂದ ನೆರವಾಗಲು ಮುಂದೆ ಬಂದರು.

**ಪೆನಿಸಿಲಿನ್ ತಂಡ :**

ಪೆನಿಸಿಲಿನ್‌ನ ವ್ಯವಸ್ಥಿತ ಹಾಗೂ ಬಹುಮುಖ ಪ್ರಯೋಗಗಳಿಗೆ ನೆರವಾಗಲು ಫ್ಲೋರೆ ಪ್ರಯೋಗಾಲಯದ ವಿವಿಧ ವಿಭಾಗಗಳಲ್ಲಿದ್ದ ಜೀವಾಣುಶಾಸ್ತ್ರ, ಜೀವವಿಜ್ಞಾನಶಾಸ್ತ್ರ, ರಸಾಯನಶಾಸ್ತ್ರ ಮುಂತಾದುವುಗಳಲ್ಲಿ ಪರಿಣತರಾದವರನ್ನೆಲ್ಲಾ ಈ ಯೋಜನೆಗೆ ಒಳಪಡಿಸಿ 'ಪೆನಿಸಿಲಿನ್ ತಂಡ' ವೊಂದನ್ನು ಸಜ್ಜುಗೊಳಿಸಿದ.

ಅಲೆಗ್ಸಾಂಡರ್ ಫ್ಲೆಮಿಂಗ್ ಪೆನಿಸಿಲಿನ್ ವಿಷಯದಲ್ಲಿ ನಡೆಸಿದ ಹಲವಾರು ಪ್ರಯೋಗಗಳನ್ನು ಪೆನಿಸಿಲಿನ್ ತಂಡದವರು ಮತ್ತೆ ಮತ್ತೆ ಮಾಡಿ ಅವನು ಗಳಿಸಿದ ಫಲಿತಾಂಶಗಳನ್ನು ಖಚಿತ ಮಾಡಿಕೊಂಡರು. ಸಂಶೋಧನೆಗೆ ಬೇಕಾಗುವ ಹೆಚ್ಚಿನ ಸಾಧನ ಸಲಕರಣೆಗಳನ್ನು ಒದಗಿಸಿಕೊಂಡರು.

ಪೆನಿಸಿಲಿಯಂ ಬೂಸಲು ಬೆಳೆದ ಮಿಶ್ರಣದಿಂದ ಪೆನಿಸಿಲಿನ್‌ನನ್ನು ಶುದ್ಧ ವಸ್ತುವಾಗಿ ಬೇರ್ಪಡಿಸುವುದು ಮುಂದಿನ ಕೆಲಸ. ಮುಂದುವರಿದ ಪ್ರಯೋಗಗಳಿಂದ ಕ್ಲೋರೋಫಾರಂ ಮತ್ತು ಅಮೈಲ್ ಅಸಿಟೇಟ್‌ನಂತಹ ರಸಾಯನಿಕಗಳ ಸಹಾಯದಿಂದ ಬೂಸಲು ರಸದಿಂದ ಪೆನಿಸಿಲಿನ್‌ನನ್ನು ಆರಿಸಿ (*Extact*) ತೆಗೆಯಲು ಸಾಧ್ಯವಾಯಿತು. ಅದೊಂದು ಆಮ್ಲೀಯ (*Acid*) ಪದಾರ್ಥವೆಂದು ಗುರುತಿಸಲಾಯಿತು.

ಪೆನಿಸಿಲಿನ್‌ನ ಸತ್ವವನ್ನು ಬಹುಕಾಲ ಕಾಪಾಡಿಕೊಂಡು ಬರಲು ಅದನ್ನು ಒಣಗಿದ ಪುಡಿಯ ರೂಪದಲ್ಲಿ ತಯಾರಿಸುವುದು ಅನಿವಾರ್ಯ. ತಂಡದ ತರುಣ ಉತ್ಸಾಹಿ ನಾರ್ಮನ್ ಹೀಟ್ಲೆ (*Norman Heatley*) ಯದು ಆ ಜವಾಬ್ದಾರಿ. ಅದೇ ಸಮಯದಲ್ಲಿ ಅವನಿಗೆ ಪ್ರತಿಷ್ಠಿತ ರಾಕ್

ಫೆಲರ್ ಫೆಲೋಷಿಪ್ ದೊರಕಿ ಕೋಪನ್ ಹೇಗನ್ (ಸ್ಕಾಂಡಿನೇವಿಯಾ) ಗೆ ಹೋಗುವ ಸದವಕಾಶ. ಬಿಡಲಾರದ ಮನಸ್ಸಿನಿಂದ ಒಂದು ಸಂಜೆ ತಂಡದವರು ಅವನಿಗೆ ವಿಧಾಯ ಹೇಳಿದರು. ಅಂದೇ ರಾತ್ರಿ ಹಿಟ್ಲರ್‌ನ ಸೈನ್ಯ ಸ್ಕಾಂಡಿನೇವಿಯಾಕ್ಕೆ ಲಗ್ಗೆ ಹಾಕಿತು. ಹೀಟ್ಲೆ ಪ್ರಯಾಣ ರದ್ದು ಮಾಡಿ ಪ್ರಯೋಗಾಲಯಕ್ಕೆ ಮಾರುದಿನ ಹಾಜರು! ಹೀಟ್ಲೆ ಮತ್ತೆ ಉತ್ಸಾಹದಿಂದ ಸಂಶೋಧನೆ ನಡೆಸಿ ಪೆನಿಸಿಲಿನ್‌ನನ್ನು ಪುಡಿಯ ರೂಪದಲ್ಲಿ ತಯಾರಿಸುವಲ್ಲಿ ಯಶಸ್ವಿಯಾದ.

ಸಾಕಷ್ಟು ಪೆನಿಸಿಲಿನ್ ಶೇಖರಣೆಯಾದಂತೆಲ್ಲಾ ಪ್ರಾಣಿ ಪ್ರಯೋಗದ ಯೋಜನೆ ಸಿದ್ಧವಾಯಿತು. ಸ್ವತಃ ಫ್ಲೋರೆಯದೇ ನಿರ್ದೇಶನ ಆದ್ದರಿಂದ ಪ್ರಯೋಗಾಲಯದ ಇಲಿಗಳ ಮೇಲೆ ೧೯೪೦ರ ಮೇ ತಿಂಗಳಲ್ಲಿ ಮೊದಲ ಪ್ರಯೋಗ. ಆರೋಗ್ಯ ಸ್ಥಿತಿಯಲ್ಲಿದ್ದ ಇಲಿಗಳ ಎರಡು ತಂಡಗಳನ್ನು ಬೇರೆ ಬೇರೆ ಬೋನುಗಳಲ್ಲಿರಿಸಿ ಪ್ಯಾಶ್ಚರ್ ನಡೆಸಿದಂತೆ ನಿಯಂತ್ರಿತ ಪ್ರಯೋಗಗಳ ಸರಣಿ ಆರಂಭ. ಅವೆಲ್ಲಕ್ಕೂ ಅತ್ಯಂತ ಮಾರಕ ಸ್ಟ್ರೆಪ್ಟೋ ಕಾಕೈ (*Streptococci*) ಗಳ ಮಿಶ್ರಣ ಚುಚ್ಚಲಾಯಿತು. ಒಂದು ಗಂಟೆಯ ನಂತರ ಒಂದು ಗುಂಪಿನ ಇಲಿಗಳಿಗೆ ಪೆನಿಸಿಲಿನ್ ಮಿಶ್ರಣ ಚುಚ್ಚಿದರು. ಇನ್ನೊಂದು ಗುಂಪಿನ ಇಲಿಗಳನ್ನು ತಾಳೆ ನೋಡುವುದಕ್ಕಾಗಿ ಇರಿಸಿ ಪೆನಿಸಿಲಿನ್ ಚುಚ್ಚಲಿಲ್ಲ. ಫ್ಲೋರೆ ಮತ್ತು ಹೀಟ್ಲೆ ಆ ರಾತ್ರಿಯೆಲ್ಲಾ ಪ್ರಯೋಗಾಲಯದಲ್ಲೇ ಉಳಿದುಕೊಂಡು, ಮೊದಲ ಗುಂಪಿನ ಇಲಿಗಳಿಗೆ ನಾಲ್ಕು ಗಂಟೆಗೊಂದು ಸಾರಿ ಪೆನಿಸಿಲಿನ್ ಮಿಶ್ರಣ ಚುಚ್ಚುವುದನ್ನು ಮುಂದುವರಿಸಿದರು. ಮಾರುದಿನ ಬೆಳಿಗ್ಗೆ ಫಲಿತಾಂಶ ಜಗಜ್ಜಾಹೀರವಾಗಿತ್ತು. ಪೆನಿಸಿಲಿನ್ ಚುಚ್ಚಿಸಿಕೊಂಡ ಇಲಿಗಳು ಆರೋಗ್ಯದಿಂದ ಬೋನಿನಲ್ಲಿ ಓಡಾಡುತ್ತಿದ್ದವು. ಚುಚ್ಚಿಸಿಕೊಳ್ಳದಿದ್ದ ಎಲ್ಲಾ ಇಲಿಗಳೂ ಸತ್ತು ಬಿದ್ದಿದ್ದವು! ಪೆನಿಸಿಲಿನ್ ತಂಡ ಇದಕ್ಕಿಂತ ಹೆಚ್ಚು ಉತ್ತೇಜನಕಾರಿ ಫಲಿತಾಂಶ ನಿರೀಕ್ಷಿಸಿರಲಿಲ್ಲ. ಮುಂದೆ ಈ ರೀತಿಯ ಪ್ರಯೋಗಗಳನ್ನು ಮೊಲ, ನಾಯಿ, ಬೆಕ್ಕು ಮುಂತಾದ ಪ್ರಾಣಿಗಳನ್ನು ಬಳಸಿ ಫಲಿತಾಂಶಗಳನ್ನು ಖಚಿತಪಡಿಸಿದರು.

ಪೆನಿಸಿಲಿನ್‌ನ ಮಾನವ ಪ್ರಯೋಗ ತಂಡದವರ ಮುಂದಿನ ಗುರಿ ಯಾವರೂ ಅದಕ್ಕೆ ಸಾಕಾಗುವಷ್ಟು ಪೆನಿಸಿಲಿನ್ ಅವರಲ್ಲಿರಲಿಲ್ಲ. ಹಾಗೂ ಅಂತಹ ಮೊತ್ತದ ಪೆನಿಸಿಲಿನ್ ತಯಾರಿಕೆಗೆ ಅಗಾಧ ಖರ್ಚು ಬೀಳುತ್ತಿದ್ದು ದರಿಂದ ಆ ಯೋಜನೆಯನ್ನು ಕೆಲಕಾಲ ಮುಂದೂಡಬೇಕಾಯಿತು. ಪೆನಿಸಿಲಿನ್ ವಿಷಯದಲ್ಲಿ ಅಲ್ಲಿಯವರೆಗೆ ಅವರು ನಡೆಸಿದ ಪ್ರಯೋಗ ಸಂಶೋಧನೆಗಳ ಫಲಿತಾಂಶಗಳನ್ನು ಲ್ಯಾನ್ಸೆಟ್ ಪತ್ರಿಕೆಯಲ್ಲಿ ಪ್ರಕಟಗೊಳಿ ಸಿದರು. ಲೇಖನದಲ್ಲಿ ಯಾರ ಹೆಸರಿಗೂ ಪ್ರಾಮುಖ್ಯತೆ ಕೊಡದೆ ಅಕಾರಾ ದಿಯಲ್ಲಿ ಹೆಸರುಗಳು ನಮೂದಾಗಿದ್ದವು!

ಪೆನಿಸಿಲಿನ್ ವಿಷಯವನ್ನು ಹೆಚ್ಚೂ ಕಡಿಮೆ ಮರೆತಿದ್ದ ಅಲೆಗ್ಸಾಂಡರ್ ಫ್ಲೆಮಿಂಗ್ ಒಂದು ಮುಂಜಾನೆ ಕಾಫಿ ಸೇವನೆ ಸಮಯದಲ್ಲಿ ಲಾನ್ಸೆಟ್ ಪತ್ರಿಕೆಯ ಪುಟಗಳನ್ನು ತಿರುವುತ್ತಿದ್ದಾಗ ಪೆನಿಸಿಲಿನ್ ಬಗೆಗೆ ಪ್ರಕಟವಾದ ಲೇಖನ ಕಣ್ಣಿಗೆ ಬಿತ್ತು. ಕುತೂಹಲದಿಂದ ಓದಿದ ಫ್ಲೆಮಿಂಗ್‌ಗೆ ಆದ ಆನಂದಕ್ಕೆ ಪರಿಮಿತಿ ಇರಲಿಲ್ಲ. ಒಂದು ದಶಕದ ಹಿಂದೆ ತಾನು ಕೈ ಬಿಟ್ಟಿದ್ದ ಪೆನಿಸಿಲಿನ್, ಪರಿಣಾಮಕಾರಿಯಾಗಿ ಉಪಯೋಗಕ್ಕೆ ಬರುವ ಹಂತದಲ್ಲಿದೆ ಯೆಂದರೆ ಅವನಿಗೆಷ್ಟು ಸಂತೋಷವಾಗಿರಬಹುದು. ತಕ್ಷಣ ಆಕ್ಸ್‌ಫರ್ಡ್ ಪೆನಿಸಿಲಿನ್ ತಂಡದವರನ್ನು ದೂರವಾಣಿಯ ಮೂಲಕ ಸಂಪರ್ಕಿಸಿ, ಅವರ ಶ್ರಮಕ್ಕೆ ಅಭಿನಂದಿಸಿದ. ಪೆನಿಸಿಲಿನ್ ತಂಡದವರೂ ಸಹಾ ಮೂಲ ಸಂಶೋಧಕನಾದ ಫ್ಲೆಮಿಂಗ್‌ನ ಗಮನಕ್ಕೆ ತಾರದೇ ಪೆನಿಸಿಲಿನ್ ಸಂಶೋಧನೆ ಮುಂದುವರಿಸಿದ್ದಕ್ಕೆ ಕ್ಷಮೆ ಕೇಳಿದರಲ್ಲದೆ ಅವನ ಸಂಶೋಧನಾ ಕೌಶಲ್ಯ ವನ್ನು ಹೊಗಳಿ, ಆಕ್ಸ್‌ಫರ್ಡ್‌ಗೆ ಭೇಟಿ ನೀಡಲು ಆಹ್ವಾನವಿತ್ತರು. ಮುಂದೆ ಕೆಲವೇ ದಿನಗಳಲ್ಲಿ ಫ್ಲೆಮಿಂಗ್ ಆಕ್ಸ್‌ಫರ್ಡ್‌ಗೆ ಹೋಗಿ ಪೆನಿಸಿಲಿನ್ ತಂಡದವರು ನಡೆಸುತ್ತಿದ್ದ ಪ್ರಯೋಗಗಳನ್ನು ವೀಕ್ಷಿಸಿ, ಮೆಚ್ಚುಗೆ ವ್ಯಕ್ತ ಪಡಿಸಿ, ಅವರಿಗೆ ಉತ್ತೇಜನ ನೀಡಿದನು.

ಮಾನವ ಪ್ರಯೋಗಕ್ಕಾಗಿ ಪೆನಿಸಿಲಿನ್ ತಯಾರಿಸುವ ಯೋಜನೆ ಅತ್ಯಂತ ತ್ರಾಸದಾಯಕವಾದುದು. ಪೆನಿಸಿಲಿನ್ ಅತ್ಯಂತ ಸೂಕ್ಷ್ಮ ರೀತಿಯ ವಸ್ತು. ಬೂಸಲನ್ನು ಬೆಳೆಸುವುದೂ ಬಹಳ ಕಷ್ಟ. ಹವಾನಿಯಂತ್ರಿತ ವಾತಾವರಣ ಅದಕ್ಕೆ ಆವಶ್ಯಕ. ಟನ್‌ಗಟ್ಟಲೆ ಬೂಸಲು ಆಹಾರ (*Mould*

*Food*) ದಲ್ಲಿ ಬೆಳೆದ ಬೂಸಲಿನಿಂದ ಕೊನೆಗೆ ಕೆಲವೇ ಮಿಲಿಗ್ರಾಂ, ನಷ್ಟು ಪೆನಿಸಿಲಿನ್! ಹೀಗಾಗಿ ಅತ್ಯಲ್ಪ ಪ್ರಮಾಣದ ಪೆನಿಸಿಲಿನ್ ತಯಾರಿಸಲು ವಿಪರೀತ ಹಣ ಖರ್ಚಾಗುತ್ತಿತ್ತು. ಪೆನಿಸಿಲಿನ್‌ನಿಂದ ಮಾನವ ಜನಾಂಗಕ್ಕಾಗಬಹುದಾದ ಪ್ರಯೋಜನವನ್ನು ಊಹಿಸಿದರೆ, ಅದರ ಉತ್ಪಾದನೆಯನ್ನು ಮೊಟಕುಗೊಳಿಸುವುದು ಮೂರ್ಖತನ. ತ್ವರಿತಗತಿಯಿಂದ ಹರಡುತ್ತಿದ್ದ ಯುದ್ಧದ ಪರಿಸ್ಥಿತಿಯಿಂದಲಾದರೂ ಪೆನಿಸಿಲಿನ್ ತಯಾರಿಕೆ ಅನಿವಾರ್ಯವಾಗಿತ್ತು.

ಪೆನಿಸಿಲಿನ್‌ನ ಹೆಚ್ಚು ಪ್ರಮಾಣದ ತಯಾರಿಕೆಗೆ ಎಷ್ಟೇ ಎಡರು ತೊಡರುಗಳಿದ್ದರು ತಂಡದವರು ತಮ್ಮ ಗುರಿಯಿಂದ ಹಿಂಜರಿಯಲಿಲ್ಲ. ತಮ್ಮೆಲ್ಲಾ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಆ ದಿಸೆಯಲ್ಲಿ ಮುಂದುವರಿದರು. ಬೇರೊಂದು ಕಟ್ಟಡವನ್ನು ವಶಕ್ಕೆ ತೆಗೆದುಕೊಂಡು ಸಂಪೂರ್ಣ ಹವಾನಿಯಂತ್ರಣದ ಏರ್ಪಾಡು ಮಾಡಿದರು. ಹೆಚ್ಚಿನ ಸಲಕರಣೆ ಮತ್ತು ಸಿಬ್ಬಂದಿಗಳ ಏರ್ಪಾಡಾಯಿತು. ದಾದಿಯರು, ಪ್ರಯೋಗಾಲಯ ಸಹಾಯಕಿಯರು, ವಿದ್ಯಾರ್ಥಿನಿಯರು ನೂರಾರು ಸಂಖ್ಯೆಯಲ್ಲಿ ಹವಾನಿಯಂತ್ರಿತ ವಾತಾವರಣದಲ್ಲಿ ಉಲ್ಲನ್ ಉಡಿಗೆಗಳಿಂದ ಸಜ್ಜಾಗಿ ಕಾರ್ಯನಿರತರಾಗಿರುತ್ತಿದ್ದುದೇ ಒಂದು ಆಹ್ಲಾದಕರ ದೃಶ್ಯವಾಗಿರುತ್ತಿತ್ತಂತೆ. ಅವರೆಲ್ಲಾ "ಪೆನಿಸಿಲಿನ್ ಹುಡುಗಿ" ಯರೆಂದೇ ಪ್ರಸಿದ್ಧರಾಗಿದ್ದರು. ಹೀಗೆ ಎರಡು ವರ್ಷ ಸತತ ನಡೆಸಿದ ಕೆಲಸದ ಪ್ರತಿಫಲ ಕೇವಲ ನಾಲ್ಕುವರೆ ಗ್ರಾಂ. ಪೆನಿಸಿಲಿನ್! ಒಬ್ಬ ರೋಗಿಯ ಪ್ರಯೋಗಕ್ಕೂ ಸಾಕಾಗಲಾರದಷ್ಟು.

**ಮಾನವ ಪ್ರಯೋಗ :**

ಸ್ವಲ್ಪ ಪೆನಿಸಿಲಿನ್ ಶೇಖರಣೆಯಾದ ನಂತರ ಅದರ ಮಾನವ ಪ್ರಯೋಗದ ಬಗೆಗೆ ಆಕ್ಸ್‌ಫರ್ಡ್‌ನ ರಾಡ್‌ಕ್ಲಿಫ್ ಆಸ್ಪತ್ರೆಯ ವೈದ್ಯ ಚಾರ್ಲ್ಸ್‌ಫ್ಲೆಚರ್ (*Charles Fletcher*) ನೊಡನೆ ಸಮಾಲೋಚನೆಗಳಾದವು. ಫ್ಲೆಚರ್ ಕೂಡ ಪೆನಿಸಿಲಿನ್ ಬಗೆಗಿನ ಲೇಖನ ಅಭ್ಯಸಿಸಿದ್ದು ಅದರ ಮುಂದಿನ ಪ್ರಗತಿಯನ್ನು ಎದುರು ನೋಡುತ್ತಿದ್ದವ. ಮೊದಲ ಪ್ರಯೋಗವೇ ತನ್ನ ನೇತೃತ್ವದಲ್ಲಿ ನಡೆಯುವ ಅವಕಾಶ ದೊರೆತದ್ದು

ಹೆಮ್ಮೆಯ ವಿಷಯ. ಪೆನಿಸಿಲಿನ್ ತಂಡದವರಿಗೆ ಪೆನಿಸಿಲಿನ್‌ನ ಪ್ರಭಾವದ ಬಗೆಗೆ ಹೆಚ್ಚಿನ ಉತ್ಸಾಹವಿದ್ದಿತ್ತಾದರೂ, ಮಾನವ ಪ್ರಯೋಗದಲ್ಲಿ ಹೆಚ್ಚು ಕಡಿಮೆ ವಿಫಲವಾದರೆ ಅಥವಾ ಅದು ರೋಗಿಯ ಸಾವಿಗೆ ಕಾರಣವಾದರೆ, ಅವರು ಅಲ್ಲಿಯವರೆಗೆ ಪಟ್ಟಪಾಡು ನೀರಿನಲ್ಲಿ ಹೋಮ ಮಾಡಿದಂತೆ ಎಂಬ ಭಯವಿದ್ದೇ ಇತ್ತು. ಈ ಬಗ್ಗೆ ಫ್ಲೆಚರ್ ಸಂಗಡ ಸಾಕಷ್ಟು ಚರ್ಚಿಸಿಯೂ ಇದ್ದರು.

ಪೆನಿಸಿಲಿನ್‌ನ ಮೊದಲ ಪ್ರಯೋಗದ ರೋಗಿ ಆಕ್ಸ್‌ಫರ್ಡ್ ಪೊಲೀಸ್ ಪೇದೆಯೊಬ್ಬ. ಅವನಿಗೆ ಆರು ತಿಂಗಳಿಂದ ಬಾಯಲ್ಲಿ ಹುಣ್ಣಾಗಿದ್ದು, ರೋಗಾಣುಗಳು ಇತರ ಅಂಗಾಂಗಗಳಿಗೂ ಹರಡಿ ಅವುಗಳಲ್ಲೂ ಕೀವುಗಟ್ಟಿತ್ತು. ವಿಪರೀತ ಜ್ವರದಿಂದಲೂ ನರಳುತ್ತಿದ್ದು ಒಂದೆರಡು ದಿನಗಳಲ್ಲಿ ಅಸು ನೀಗುವಂತಿದ್ದನು.

ಪ್ರಯೋಗಕ್ಕಾಗಿ ನಿಗದಿ ಪಡಿಸಿದ ೧೯೪೧ ರ ಫೆಬ್ರುವರಿ ೧೨ ರಂದು ಆಸ್ಪತ್ರೆಯ ವಾರ್ಡ್ ತುಂಬಾ ಕಿಕ್ಕಿರಿದ ವೈದ್ಯ ಸಮೂಹ, ಆಕ್ಸ್‌ಫರ್ಡ್ ಪೆನಿಸಿಲಿನ್ ತುಡದವರ ಸಮ್ಮುಖದಲ್ಲಿ ಫ್ಲೆಚರ್ ಪೊಲೀಸ್ ಪೇದೆಗೆ ೨೦೦ ಮಿಲಿಗ್ರಾಂ . ಪೆನಿಸಿಲಿನ್ ಹುಡಿಯನ್ನು ನೀರಲ್ಲಿ ಕರಗಿಸಿ ರಕ್ತನಾಳದ ಮೂಲಕ ನೀಡಿದನು. ಪ್ರತಿ ಮೂರು ಗಂಟೆಗಳಿಗೊಮ್ಮೆ ೧೦೦ ಮಿಲಿಗ್ರಾಂ. ನಷ್ಟನ್ನು ಅದೇ ರೀತಿ ಕೊಡುವುದನ್ನು ಮುಂದಿನ ೨೪ ಗಂಟೆ ಮುಂದುವರಿಸಿದರು. ಎಷ್ಟೋ ದಿನಗಳಿಂದ ಕುಗ್ಗದ ಜ್ವರ ಬಿಟ್ಟಿತು. ಬಾಯಿಂಯ ಹುಣ್ಣು ಗುಣಮುಖವಾಗುವ ಚಿಹ್ನೆಗಳನ್ನು ತೋರಿತು. ಅವನ ಪರಿಸ್ಥಿತಿ ಸುಧಾರಿಸಿತು. ಮೂರು ದಿನಗಳಲ್ಲಿ ರೋಗಿ ಹರ್ಷಭರಿತನಾಗಿದ್ದು ಸಂಪೂರ್ಣ ಗುಣ ಹೊಂದುವ ಆಶಾಭಾವನೆ ಎಲ್ಲರಲ್ಲೂ ಮೂಡಿತ್ತು, ಅಷ್ಟರಲ್ಲೇ ಶೇಖರಿಸಿದ್ದ ಪೆನಿಸಿಲಿನ್ ಮುಗಿಯಿತು. ಮೂತ್ರದಲ್ಲಿ ಹೊರಹೋಗುತ್ತಿದ್ದ ಪೆನಿಸಿಲಿನ್‌ನಸ್ವಲ್ಪ ಅಂಶವನ್ನು ಮತ್ತೆ ಬೇರ್ಪಡಿಸಿ ಸಹಾ ಉಪಯೋಗಿಸಿದರು. ಒಂದು ವಾರದೊಳಗೆ ಪೆನಿಸಿಲಿನ್ ಕೊಡುಗೆ ಸಂಪೂರ್ಣ ನಿಲ್ಲಬೇಕಾಯಿತು. ರೋಗಿಯ ಪರಿಸ್ಥಿತಿ ಕ್ರಮೇಣ ಉಲ್ಬಣಗೊಂಡಿತು. ಜ್ವರ ಮರುಕಳಿಸಿತು, ಹುಣ್ಣು ಪ್ರಸರಿಸಿತು. ಪರಿಸ್ಥಿತಿ ಬಿಗಡಾಯಿಸಿ, ಮಾರ್ಚ್ ೧೫ರಂದು ಅಸು ನೀಗಿದ. ಪೆನಿಸಿಲಿನ್ ತನ್ನ ಮೊದಲ ಸಮರದಲ್ಲಿ ಬಹಳ ಮುನ್ನುಗ್ಗಿದ್ದರೂ

ಕೊನೆಗೆ ಸೋಲನುಭವಿಸಬೇಕಾಯಿತು. ಪೆನಿಸಿಲಿನ್ ತಂಡದವರಿಗೆ ನಿರಾಶೆಯಾದರೂ ಸೋಲೊಪ್ಪಲಿಲ್ಲ, ತಯಾರಿಕೆ ಮುಂದುವರಿಯಿತು.

ಸೊಂಟದ ಮೂಳೆಯಲ್ಲಿ ಬಹಳ ಕಾಲದಿಂದ ಕೀವು ಸೇರಿ ನರಳುತ್ತಿದ್ದ ೧೫ ವರ್ಷದ ಬಾಲಕ ಪೆನಿಸಿಲಿನ್ ಪ್ರಯೋಗದ ಎರಡನೇ ರೋಗಿ. ಸಲ್ಫೋನಾಮೈಡ್ ಪ್ರಯೋಗ ಅವನಿಗೆ ಪ್ರಯೋಜನಕಾರಿಯಾಗಿರಲಿಲ್ಲ. ಸತತವಾಗಿ ಐದು ದಿನಗಳ ಪೆನಿಸಿಲಿನ್ ಪ್ರಯೋಗದಿಂದ ಚೇತರಿಸಿ ಬದುಕಿದ.

ಪೆನಿಸಿಲಿನ್‌ನ ಉತ್ಪಾದನಾ ವೆಚ್ಚ ತಂಡದವರ ಧೈರ್ಯವನ್ನು ತತ್ತರಿಸಿತು. ಎರಡು ರೋಗಿಗಳಿಗೆ ಸಾಕಾಗುವಷ್ಟು ಪೆನಿಸಿಲಿನ್ ಉತ್ಪಾದನೆಗೆ ಎರಡು ವರ್ಷಗಳೇ ಬೇಕಾಗಿದ್ದವು. ಒಂದು ದಿನಕ್ಕೆ ಬೇಕಾಗುವ ಪೆನಿಸಿಲಿನ್‌ಗೆ ತಗಲುವ ವೆಚ್ಚ ಐದು ಸಾವಿರ ಡಾಲರ್. ಲೋಹಗಳಲ್ಲಿ ರೇಡಿಯಂನಂತೆ ಔಷಧಿಗಳಲ್ಲಿ ಪೆನಿಸಿಲಿನ್ ಎಂಬ ಕೆಲವರ ಉದ್ಗಾರದಲ್ಲಿ ಹುರುಳಿರದಿರಲಿಲ್ಲ. ತಂಡದವರು ಹೆಚ್ಚಿನ ಪೆನಿಸಿಲಿನ್ ತಯಾರಿಕೆಯ ಬಗೆಗೆ ಬ್ರಿಟಿಷ್ ಮೆಡಿಕಲ್ ರೀಸರ್ಚ್ ಕೌನ್ಸಿಲ್, ರಾಕ್‌ಫೆಲರ್ ಫೌಂಡೇಷನ್, ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ ಮುಂತಾದ ಸಂಘ ಸಂಸ್ಥೆಗಳಿಂದ ಉದಾರ ನೆರವು ಪಡೆದರು.

ಹೀಗೆ ಹೆಚ್ಚಾದ ಉತ್ಪಾದನೆಯಿಂದ ಬೆನ್ನಿನ ಮೇಲೆ ಬಾವು ಇದ್ದ ರೋಗಿಯೊಬ್ಬನಿಗೆ ಏಳು ದಿನ ಪೆನಿಸಿಲಿನ್ ಕೊಟ್ಟು ಗುಣ ಮಾಡಿದರು. ಸಿಡುಬಿನಿಂದ ಶ್ವಾಸಕೋಶದಲ್ಲಿ ತೊಡಕುಂಟಾಗಿದ್ದ ಬಾಲಕ ಪೆನಿಸಿಲಿನ್ ಸಹಾಯದಿಂದ ಮೂರೇ ದಿನಗಳಲ್ಲಿ ಚೇತರಿಸಿಕೊಂಡ. ಒಂದಾದ ಮೇಲೆ ಒಂದರಂತೆ ಪೆನಿಸಿಲಿನ್ ಜಯಗಳಿಸಲಾರಂಭಿಸಿತು. ಈ ಎಲ್ಲಾ ಫಲಿತಾಂಶಗಳು ೧೯೪೧ರ ಆಗಸ್ಟ್ ೧೬ರ ಲ್ಯಾನ್ಸೆಟ್‌ನಲ್ಲಿ ಪ್ರಕಟವಾದವು. ಪೆನಿಸಿಲಿನ್ ಮಾನವ ಪ್ರಯೋಗದಲ್ಲಿ ಜಯಗಳಿಸಿದ ಸುದ್ದಿ ತಿಳಿದ ಫ್ಲೆಮಿಂಗ್ ಆಕ್ಸ್‌ಫರ್ಡ್‌ಗೆ ಧಾವಿಸಿ ತನ್ನ ಸಂತಸ ವ್ಯಕ್ತಪಡಿಸಿದ. ಮುಂದೆ ಕೆಲದಿನಗಳಲ್ಲಿ ಬಾಲ್ಯ ಸ್ನೇಹಿತ ಹಾಗೂ ಬ್ರಿಟನ್ನಿನ ಪ್ರಧಾನಿ ವಿನ್ಸ್‌ಟನ್ ಚರ್ಚಿಲ್ ಯುದ್ಧ ಸಮಯದಲ್ಲಿ ಈಜಿಪ್ಟ್‌ಗೆ ಭೇಟಿ ಕೊಟ್ಟಾಗ ನಿಮೋನಿಯಾದಿಂದ ನರಳಿ ವಿಷಮ ಸ್ಥಿತಿಯಲ್ಲಿದ್ದಾಗ ಸ್ವತಃ ಫ್ಲೆಮಿಂಗ್‌ನೇ ಪೆನಿಸಿಲಿನ್ ತೆಗೆದುಕೊಂಡು ಹೋಗಿ ಚಿಕಿತ್ಸೆ ಮಾಡಿ ಚರ್ಚಿಲ್‌ಗೆ ಎರಡನೇ ಸಾರಿ ಜೀವದಾನ ಮಾಡಿದ.

ಆಕ್ಸ್‌ಫರ್ಡ್ ಪೆನಿಸಿಲಿನ್ ತಂಡದವರು ಮಾನವ ಕಲ್ಯಾಣಕ್ಕೆ ಅಗಾಧ ಸಹಾಯದ ಭರವಸೆ ತೋರಿಸುತ್ತಿದ್ದ ಪೆನಿಸಿಲಿನ್‌ನ ಉತ್ಪಾದನೆಗೆ ಎಷ್ಟೋ ಶ್ರಮ ವಹಿಸಿ ದುಡಿಯುತ್ತಿದ್ದರೂ ಅವರ ಗುರಿ ಸಾಧನೆಗೆ ಹಲವಾರು ಅಡಚಣೆಗಳಿದ್ದವು. ಆರ್ಥಿಕ ಮುಗ್ಗಟ್ಟಿನ ಜೊತೆಗೆ ಯುದ್ಧವೂ ಮೊದಲಿಂದಲೂ ಪೆನಿಸಿಲಿನ್ ಸಂಶೋಧನೆಗಳ ಹಾದಿಯಲ್ಲಿ ತನ್ನ ಪ್ರಭಾವ ಬೀರುತ್ತಲೇ ಇತ್ತು. ಯುರೋಪ್‌ನಲ್ಲಿ ಹಿಟ್ಲರ್‌ನ ಸೇನೆ ಒಂದಾದ ಮೇಲೊಂದು ರಾಷ್ಟ್ರವನ್ನೇ ಕಬಳಿಸಿದ ನಂತರ ಇಂಗ್ಲೆಂಡ್‌ನ ಮೇಲೂ ಬಾಂಬ್ ದಾಳಿ ಆರಂಭಿಸಿತು. ಬ್ರಿಟನ್ನಿನ ಆರ್ಥಿಕ ಪರಿಸ್ಥಿತಿ ಹದಗೆಡುವುದರ ಜೊತೆಗೆ ಪೆನಿಸಿಲಿನ್ ಘಟಕಗಳು ಸಹಾ ಬಾಂಬ್ ದಾಳಿಗೆ ತುತ್ತಾಗಿ ನಾಶವಾಗುವ ಸಾಧ್ಯತೆಗಳಿದ್ದವು. ಈ ಕಾರಣಗಳಿಂದ ಪೆನಿಸಿಲಿನ್ ತಂಡದವರು ಅದರ ಅಭಿವೃದ್ಧಿಗೆ ಬೇರೆ ಮಾರ್ಗಗಳನ್ನು ಹುಡುಕುವುದು ಅನಿವಾರ್ಯವಾಯಿತು. ಆಗಿನ್ನೂ ಯುದ್ಧದಲ್ಲಿ ನೇರವಾಗಿ ಭಾಗವಹಿಸದ ಹಾಗೂ ಸಂಪದ್ಭರಿತ ಅಮೆರಿಕಾದತ್ತ ಅವರ ಗಮನ ಹರಿಯಿತು. ಅಲ್ಲಿನ ಕೆಲವು ಔಷಧ ತಯಾರಕರು ಮೊದಲಿನಿಂದಲೂ ಪೆನಿಸಿಲಿನ್ ತಯಾರಿಕೆಯ ಬಗೆಗೆ ಅವರಿಂದ ಮಾಹಿತಿ ಕೇಳುತ್ತಲೂ ಇದ್ದರು. ಈಗಂತೂ ರಾಕ್‌ಫೆಲರ್ ಫೌಂಡೇಷನ್‌ನವರು ನೇರ ಆಹ್ವಾನ ನೀಡಿ ತಂಡದವರನ್ನು ಅಮೆರಿಕಾಕ್ಕೆ ಬರುವಂತೆ ಕೇಳಿಕೊಂಡರು.

ಅಮೆರಿಕಾದ ಆಹ್ವಾನ ಸ್ವೀಕರಿಸಿ ಫ್ಲೋರೆ ಮತ್ತು ಹೀಟ್ಲೆ ೧೯೪೧ರ ಉತ್ತರಾರ್ಧದಲ್ಲಿ ಪೆನಿಸಿಲಿನ್ ಬೂಸಲಿನೊಡನೆ ಅಲ್ಲಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ಅವರಿಗೆ ಬೇಕಾಗುವ ಎಲ್ಲಾ ಸೌಲಭ್ಯಗಳನ್ನು ಒದಗಿಸಲು ರಾಕ್‌ಫೆಲರ್ ಫೌಂಡೇಷನ್‌ನವರು ಸಿದ್ಧರಾದರು. ಪೆನಿಸಿಲಿನ್ ತಯಾರಿಸುವ ಗುಟ್ಟನ್ನು ಬಹಿರಂಗಪಡಿಸದೇ ಸ್ವಾಮ್ಯ ಸನ್ನದನ್ನು (*Patent*) ಪಡೆಯುವ ಅವಕಾಶವಿದ್ದರೂ ಅದಕ್ಕವರು ಇಷ್ಟಪಡಲಿಲ್ಲ.

ಹವಾನಿಯಂತ್ರಿತ ಬೃಹತ್ ಕಟ್ಟಡ ಸಜ್ಜಾಯಿತು. ವಿವಿಧ ತಜ್ಞರ ಇನ್ನೊಂದು ಪೆನಿಸಿಲಿನ್ ತಂಡ ಅಲ್ಲಿ ನಿರ್ಮಾಣವಾಯಿತು. ೧೯೪೧ರ ಅಂತ್ಯದೊಳಗೆ ಎರಡು ಪೌಂಡುಗಳಷ್ಟು ಪೆನಿಸಿಲಿನ್ ತಯಾರಿಸುವ ಯೋಜನೆ, ನೂರು ಮಿಲಿಯನ್ ಡಾಲರುಗಳ ವೆಚ್ಚದಲ್ಲಿ!

ಪೆನಿಸಿಲಿನ್‌ನ ಇಳುವರಿಯನ್ನು ಹೆಚ್ಚಿಸಲು ವಿವಿಧ ಜಾತಿಯ ಪೆನಿಸಿಲಿಯಂ ನೋಟೇಟಮ್‌ನ ಶೇಖರಣೆ ಮತ್ತು ಬೆಳೆಯ ಪ್ರಯೋಗ, ಆದಕ್ಕಾಗಿ ವಿವಿಧ ಪ್ರದೇಶಗಳಿಂದ ಬೂಸಲ ಮಾದರಿ ತರಿಸಿಕೊಂಡರು. ಅಮೆರಿಕಾದ ವಿಮಾನ ಚಾಲಕರು ಹೋಗುವ ಪ್ರಪಂಚದ ಮೂಲೆ ಮೂಲೆಗಳಿಂದ ಬೂಸಲ ಮಾದರಿ ತರುವ ಏರ್ಪಾಡಾಯಿತು. ಪಿಯೋರಿಯಾ ಎಂಬಲ್ಲಿನ ಹಣ್ಣು ಮಾರುಕಟ್ಟೆಯಲ್ಲಿದ್ದ ಕಲ್ಲಂಗಡಿ ಹಣ್ಣಿನಲ್ಲಿ ಬೆಳೆಯುತ್ತಿದ್ದ ಬೂಸಲಿನಿಂದ ಹೆಚ್ಚು ಇಳುವರಿ ಬರುತ್ತದೆಂಬುದು ಗೋಚರವಾಯಿತು. ಪಿಷ್ಟ (*Starch*) ತಯಾರಿಸಲು ಕೊಳೆ ಹಾಕಿದ ಧಾನ್ಯದ ನೀರನ್ನು ಬೂಸಲಿನ ಆಹಾರದ ಜೊತೆ ಸೇರಿಸಿದರೆ ಇನ್ನೂ ಹೆಚ್ಚಿನ ಇಳುವರಿ ಸಿಗುತ್ತದೆಂಬುದು ಇನ್ನೊಂದು ಪ್ರಯೋಗದಿಂದ ತಿಳಿದ ವಿಷಯ. ಈ ಹೊಸ ವಿಧಾನಗಳಿಂದ ೧೯೪೩ರ ಜನವರಿಯಲ್ಲಿ ಎರಡು ಔನ್ಸ್ ಪೆನಿಸಿಲಿನ್ ದೊರೆಯುತ್ತಿದ್ದುದು ಮೇ ತಿಂಗಳಲ್ಲಿ ೪೨೦ ಔನ್ಸ್‌ಗೂ ಜೂನ್‌ನಲ್ಲಿ ೭೭೨ ಔನ್ಸ್‌ಗೂ ಏರಿತು! ಅಷ್ಟರಲ್ಲಿ ಯುದ್ಧದ ಕಾವು ಅಮೆರಿಕಾಕ್ಕೂ ತಗಲಿದ್ದು ಪೆನಿಸಿಲಿನ್ ಉತ್ಪಾದನೆಗೆ ಅಡಚಣೆಯಾಗುವ ಬದಲು ಅದು ಹೆಚ್ಚಾಗಲು ಉತ್ತೇಜನ ಕೊಟ್ಟಂತಾಯಿತು.

ಉತ್ಪಾದನೆ ಹೆಚ್ಚಿದಂತೆಲ್ಲಾ ಪೆನಿಸಿಲಿನ್ ಬೇರೆ ಬೇರೆ ಕಾಯಿಲೆಗಳ ರೋಗಾಣುಗಳ ವಿರುದ್ಧ ಪ್ರಯೋಗಿಸಲಾಯಿತು. ಮಾನವ ಜನಾಂಗದ ಕಳಂಕಗಳೆನಿಸಿದ ಗನೋರಿಯಾ ಮತ್ತು ಸಿಫಿಲಿಸ್ ಮೇಹ ರೋಗಗಳ ರೋಗಾಣುಗಳು ಪೆನಿಸಿಲಿನ್‌ಗೆ ಶರಣಾಗತವಾದವು. ಸಬ್ ಅಕ್ಯೂಟ್ ಬ್ಯಾಕ್ಟೀರಿಯಲ್ ಎಂಡೋಕಾರ್ಡೈಟಿಸ್ (*Sub Acute Bacterial Endocarditis*) ಎಂಬ ಹೃದಯ ಸಂಬಂಧದ ಕಾಯಿಲೆ ತನ್ನ ಬಾಲ ಮುದುಡಬೇಕಾಯಿತು. ಮಿಲಿಟರಿ ಕಾರ್ಯಾಚರಣೆಯಲ್ಲಿ ಗಾಯಗೊಂಡು ಕೀವಾದವರಿಗೆ ಪೆನಿಸಿಲಿನ್ ವರಪ್ರಸಾದವಾಯಿತು. ಪ್ರಪಂಚದ ಮೂಲೆ ಮೂಲೆಗಳಿಂದ ಪೆನಿಸಿಲಿನ್ ಸರಬರಾಜಿನ ಬಗೆಗೆ ಕೋರಿಕೆ, ಅದರ ಉಪಯುಕ್ತತೆಯ ಬಗೆಗೆ ವೈದ್ಯಕೀಯ ಪತ್ರಿಕೆಗಳಲ್ಲಿ ನೂರಾರು ಲೇಖನಗಳ ಪ್ರಕಟಣೆ, ಅವರ ಸಂಶೋಧಕರಾದ ಫ್ಲೆಮಿಂಗ್, ಫ್ಲೋರೆ, ಚೈನ್ ಮುಂತಾದವರ ಹೆಸರು ಪ್ರಪಂಚಾದ್ಯಂತ ಮನೆ ಮಾತಾಯಿತು. ವೈದ್ಯಕೀಯ

ವಿಭಾಗದ ನೋಬೆಲ್ ಬಹುಮಾನವನ್ನು ಫ್ಲೆಮಿಂಗ್, ಫ್ಲೋರೆ ಮತ್ತು ಚೈನ್‌ರಿಗಿತ್ತು ಗೌರವಿಸಲಾಯಿತು. ಬ್ರಿಟಿಷ್ ಪ್ರಜೆಗಳಾದ ಫ್ಲೆಮಿಂಗ್ ಮತ್ತು ಫ್ಲೋರೆಗೆ ನೈಟ್‌ಹುಡ್ (*Knighthood*) ದೊರೆತರೆ, ನಿರಂತರ ನಿರಾಶ್ರಿತ ಚೈನ್‌ಗೆ ಇಟಲಿಗೆ ಸ್ವಾಗತ ಮಾಡಲಾಯಿತು. ಅಲ್ಲಿ ಸಂಶೋಧನಾ ಸಂಸ್ಥೆಯ ನಿರ್ದೇಶಕನ ಹುದ್ದೆ, ಮತ್ತೊಂದು ದೇಶಕ್ಕೆ ಪ್ರಯಾಣ, ಇನ್ನೊಂದು ಭಾಷೆಯ ಅಭ್ಯಾಸ, ಮತ್ತೆ ಹೊಸ ಜೀವನಾರಂಭ!

ಅರ್ಧ ಶತಮಾನದ ಹಿಂದೆ ಸೂಕ್ಷ್ಮಗ್ರಾಹಿಯಾದ ಅಲೆಗ್ಸಾಂಡರ್ ಫ್ಲೆಮಿಂಗ್‌ನ ಕಣ್ಣಿಗೆ ಬಿದ್ದ ಪೆನಿಸಿಲಿಯಂ ಬೂಷಲಿನಿಂದ ಹೊರಬಂದ ಪೆನಿಸಿಲಿನ್ ಕೆಲಕಾಲ ಅಜ್ಞಾತವಾಗಿದ್ದು, ಮುಂದೆ ವಿವಿಧ ರಾಷ್ಟ್ರಗಳಿಂದ ಆಕಸ್ಮಿಕವಾಗಿ ಸೇರಿದ ವೈದ್ಯ ವಿಜ್ಞಾನಿಗಳ ಅವಿರತ ಸಂಶೋಧನಾ ಚಟುವಟಿಕೆಗಳಿಂದ ಈಗ ಆಧುನಿಕ ಸಂಜೀವನಿಯಾಂತಾಗಿದೆ. ಸಂಶೋಧನೆಯ ವಿವಿಧ ಹಂತಗಳಲ್ಲಿ ಅನೇಕ ಎಡರು ತೊಡರುಗಳನ್ನೆದುರಿಸಿ ಹೊರಬಂದ ಒಂದು ಕಾಲದಲ್ಲಿ ಬಹಳ ದುಬಾರಿಯಾಗಿದ್ದು, ವಿಜ್ಞಾನಿಗಳ ತ್ಯಾಗಮಯ ಶ್ರಮದಿಂದ ಇಂದು ನಿರ್ಗತಿಕರಿಗೂ ದೊರೆಯುವಂತಾಗಿದೆ.

ಸಂಶೋಧನೆಗೆ ಒಂದುಗೂಡಿದ ವಿಜ್ಞಾನಿಗಳಾದ ಫ್ಲೆಮಿಂಗ್, ಫ್ಲೋರೆ, ಚೈನ್, ಹೀಟ್ಲೆ ಮುಂತಾದವರ ನಿಸ್ವಾರ್ಥ ಸೇವಾ ಮನೋಭಾವ, ಸಹಕಾರ ಪ್ರವೃತ್ತಿ, ಸಮರ್ಪಣಾಭಾವ, ಗುರಿ ಮುಟ್ಟುವಲ್ಲಿನ ಅಚಲ ವಿಶ್ವಾಸ, ವೈಜ್ಞಾನಿಕ ಸಂಶೋಧಕರಲ್ಲಿ ವಿರಳ. ಈ ಎಲ್ಲಾ ದೃಷ್ಟಿಕೋನಗಳಿಂದ ಪೆನಿಸಿಲಿನ್ ಸಂಶೋಧನೆ ಒಂದು ಅಪೂರ್ವ ಘಟನೆಯೆನ್ನಬಹುದು.

ಪೆನಿಸಿಲಿನ್ ಉಗಮ ಜೀವಿರೋಧಕ ಅಥವಾ ಆಂಟಿ ಬಯೋಟಿಕ್ (*Antibiotic*) ಯುಗಕ್ಕೆ ನಾಂದಿ. ಈ ತತ್ವದ ಆಧಾರದ ಮೇಲೆ ಈಗ ಮಾನವ ರೋಗಗಳಿಗೆ ಕಾರಣವಾದ ಬಹುತೇಕ ರೋಗಾಣುಗಳ ವಿರುದ್ಧ ಪರಿಣಾಮಕಾರಿಯಾಗಿ ಸೆಣಸುವ ವಿಶಾಲ ಕ್ರಿಯಾಶೀಲತೆಯ ಆಂಟಿಬಯೋಟಿಕ್‌ಗಳು ಲಭ್ಯವಾಗಿವೆ. ಪೆನಿಸಿಲಿನ್ ಶ್ರೇಣಿಯಲ್ಲೇ ವಿವಿಧ ರೀತಿಯ ಪೆನಿಸಿಲಿನ್‌ಗಳು ತಯಾರಾಗಿವೆ.

ಪೆನಿಸಿಲಿನ್ ಈಗ ಸರ್ವವ್ಯಾಪಿಯಾಗಿದೆ. ಅದರ ಇನ್ನೊಂದು ಮುಖ ಇತ್ತೀಚೆಗೆ ಬೆಳಕಿಗೆ ಬರುತ್ತಿದ್ದು ಅದಕ್ಕೆ ಕೆಟ್ಟ ಹೆಸರನ್ನು ತರುತ್ತಿದೆ. ಅದು

ಕೆಲವರ ಜೀವಗಳನ್ನು ಆಹುತಿ ತೆಗೆದುಕೊಳ್ಳುತ್ತಿರುವುದು ಸೋಜಿಗದ ಸಂಗತಿ.

ಪೆನಿಸಿಲಿನ್‌ನ ಅಪಾರ ಕ್ರಿಯಾಶೀಲತೆ ಅದರ ವ್ಯಾಪಕ ಬಳಕೆಗೆ ಎಡೆ ಮಾಡಿಕೊಟ್ಟಿತು. ಅದು ಅಗ್ಗವಾಗಿ ದೊರೆಯಲಾರಂಭಿಸಿದ ಮೇಲೆ, ಅದರ ಆವಶ್ಯಕತೆ ಇರಲಿ, ಇಲ್ಲದಿರಲಿ, ಅದು ಪ್ರಯೋಗಿಸಲ್ಪಟ್ಟಿತು. ಬಳಸುವ ಪ್ರಮಾಣ ಮತ್ತು ವಿಧಾನಗಳಲ್ಲೂ ಬದಲಾವಣೆಗಳಾದವು. ಅಂಗಡಿಗಳಲ್ಲಿ ಸುಲಭವಾಗಿ ದೊರೆಯುವುದರಿಂದ ವೈದ್ಯರ ಸಲಹೆ ಇಲ್ಲದೆಯೂ ಉಪಯೋಗಿಸಲ್ಪಟ್ಟಿತು. ಈಗ ಪೆನಿಸಿಲಿನ್‌ನನ್ನು ಯಾವುದಾದರೂ ಒಂದು ರೂಪದಲ್ಲಿ ಸೇವಿಸದಿದ್ದವರು ವಿರಳವೆನ್ನಬಹುದು. ಅದು ಅತಿ ಕಿರು ಪ್ರಮಾಣದಲ್ಲಿ ಬಹುತೇಕ ಜನರ ಶರೀರದಲ್ಲಿರುವಂತಾಗಿ, ಮುಂದಿನ ಸಾರಿ ಅಂತಹವರಿಗೆ ಪೆನಿಸಿಲಿನ್ ಇಂಜಕ್ಷನ್ ನೀಡಿದಾಗ "ಪ್ರತಿಕ್ರಿಯೆ" (*Reaction*) ಯಾಗುವ ಸಾಧ್ಯತೆಗಳಿವೆ. ಅಂತಹವರಿಗೆ ತಕ್ಷಣ ಸೂಕ್ತ ಪ್ರತಿರೋಧಕ ಚಿಕಿತ್ಸೆ ದೊರೆಯದಿದ್ದರೆ ಅವರು ಸಾಯಬಹುದು. "ಪರೀಕ್ಷಾ ಕೊಡುಗೆ" (*Test Dose*) ಯಿಂದಲೇ ಹಲವಾರು ಜನ ಅಸುನೀಗಿದ ನಿದರ್ಶನಗಳಿದ್ದು, ಮದ್ರಾಸ್‌ನ ಜನರಲ್ ಆಸ್ಪತ್ರೆಯಲ್ಲಿ ಹೊರರೋಗಿಗಳಿಗೆ ಪೆನಿಸಿಲಿನ್ ಕೊಡುಗೆಯನ್ನು ನಿಷೇಧಿಸಿದ್ದಾರಂತೆ! ಇದು ಪೆನಿಸಿಲಿನ್‌ನನ್ನು ಬಹಳ ಹಗುರವಾಗಿ ಕಂಡು ದುರುಪಯೋಗ ಮಾಡಿದ ಫಲ. ಈಗಲೂ ಅದನ್ನು ಎಚ್ಚರಿಕೆಯಿಂದ ನಿಯಮಿತವಾಗಿ ಉಪಯೋಗಿಸಿದಲ್ಲಿ ಅದರ ಉಪಯುಕ್ತತೆ ಮತ್ತು ಕ್ರಿಯಾಶೀಲತೆಗೆ ಕುಂದಿಲ್ಲ. ವೈದ್ಯರು ಮತ್ತು ಸಾಮಾನ್ಯ ಜನರು ಅದರೊಡನೆ ತಮ್ಮ ಚೆಲ್ಲಾಟವನ್ನು ನಿಲ್ಲಿಸುವುದೊಳಿತು.

## ಆಧಾರ ಗ್ರಂಥಗಳು

1 **Devils, Drugs and Doctors**
*By : Howard W Haggard*
*Pocket Books, Inc, Newyork Ny (1954)*

2 **The Century of the Surgeon**
*By : Jurgen Thorwald*
*Pan Books Ltd., London (1957)*

3 **The Amazing World of Medicine**
*Ed. By : Helen Wright and Samuel Rapport*
*Harper Brothers, Newyork (1961)*

4 **Men who Shaped the Future**
*By : Egon Larsen*
*Blackie and Son (India) Ltd., Bombay (1963)*

